

ಪಾಪೋಸು ಹೋದುವಲ್ಲ ಸ್ವಾಮಿ ಎನ್ನ
ಪಾಪೋಸು ಹೋದುವಲ್ಲ ॥ ಪ ॥

ಅಪಾರ ಜನುಮದಿ ಅರ್ಜನೆಯ ಮಾಡಿದ ॥ ಅ.ಪ ॥

ಉರಗಾದ್ರಿಯಲ್ಲಿ ಸ್ವಾಮಿ ಪುಷ್ಕರಿಣಿ ಮೊದಲಾದ
ಪರಿಪರಿ ತೀರ್ಥಸ್ನಾನಗಳ ಮಾಡೆ
ಹರಿದಾಸರ ಕೂಡಿ ಶ್ರೀನಿವಾಸನ ಸಂ
ದರುಶನದಲ್ಲಿ ಮೈಮರೆದಿದ್ದೆನೊ ಎನ್ನ – ೧ –

ಪರಮ ಭಾಗವತರು ಹರಿಕಥೆ ಕೇಳಲು
ಪರಮ ಭಕುತಿಯಲಿ ಕೇಳುತಿದ್ದೆ
ಪರಮ ಪಾಪಿಷ್ಠರ ಪಾಲಿಗೆ ಪೋದುವು
ಪರಮಾತ್ಮನ ಮನಸಿಗೆ ಬಂತು ಹೀಗೆ – ೨ –

ಮಾಯೆ ಒಲಿದು ಎನಗೆ ತಂದುಕೊಟ್ಟಿದ್ದಳು
ದಾಯಾದಿಗಳು ನೋಡಿ ಸಹಿಸಲಿಲ್ಲ
ಮಾಯಾರಮಣ ನಮ್ಮ ಪುರಂದರ ವಿಠಲನ
ಮಾಯೆಯಿಂದ ಮಟ್ಟ, ಮಾಯವಾದವು ಈಗ – ೩ –

ಶ್ರೀಪುರಂದರದಾಸರು



# ಓದುಗರ ಓಲೆ

ಮಾನ್ಯರೆ ;

ಏಪ್ರಿಲ್ ತಿಂಗಳ ಸಂಚಿಕೆಯಲ್ಲಿ ಪ್ರಕಟವಾಗಿರುವ ಮಹರ್ಷಿ ಅತ್ರಿ ಬಹಳ ಚೆನ್ನಾಗಿ ಮೂಡಿ ಬಂದಿದೆ. ಮುಖಪುಟವು ಕೂಡ ಚೆನ್ನಾಗಿ ಮೂಡಿ ಬಂದಿದೆ. ಸಂಪಾದಕರಿಗೆ ನನ್ನ ಧನ್ಯವಾದಗಳು.

ನಾರಾಯಣ ಅಡವಿರಾವ್
ರಾಯಚೂರು

ಸ್ವಾಮಿ ;

ಏಪ್ರಿಲ್ 8೫ ರ ಕನ್ನಡ – ಹಿಂದಿ ಎರಡೂ ಸಪ್ತಗಿರಿ ಪತ್ರಿಕೆಗಳು ಒಂದರಂದೇ ತಲ್ಪಿದವು. ಪ್ರತಿ ತಿಂಗಳೂ ಹೀಗಿಯೇ ಆಯಾ ತಿಂಗಳ ಒಂದರಂದೇ ಪತ್ರಿಕೆಗಳು ನಮಗೆ ತಲುಪುವಂತೆ ವ್ಯವಸ್ಥೆಯಾಗ ಬೇಕೆಂದು ಶ್ರೀನಿವಾಸನಲ್ಲಿ ಬೇಡಿಕೆ.

ವಿ. ಎಸ್. ಝಿಂಗಾಡೆ
ಮುದ್ದೇಬಿಹಾಳ

ಮಾನ್ಯರೆ ;

ಏಪ್ರಿಲ್ ತಿಂಗಳ ಸಪ್ತಗಿರಿ ಮೊದಲವಾರದ ಮೊದಲದಿನೇ ನಮ್ಮ ಕೈಸೇರಿದ್ದು ಬಹಳ ಸಂತೊಷ.

ಇದೇ ರೀತಿ ತಿಂಗಳು ತಿಂಗಳು ಸರಿಯಾದ ಸಮಯದಲ್ಲಿ ಸಪ್ತಗಿರಿ ಮುಟ್ಟುತ್ತದೆ ಎಂದು ನಂಬಿರುತ್ತೇವೆ.

ಗೋವಿಂದರಾಜ ಶೆಟ್ಟರ್
ವಿಜಯಲಕ್ಷ್ಮಿ ಶೆಟ್ಟರ್
ಹಿಟ್ನಾಳ

ಮಾನ್ಯರೆ ;

ಏಪ್ರಿಲ್ ಸಂಚಿಕೆಯ ಮುಖಪುಟದ ರಾಮಾನುಜಾಚಾರ್ಯರು ಕ್ಷಣಕಾಲ ನಿಂತು ನೋಡುವಂತೆ ಮಾಡಿದರು. ಒಳಗಿನ ಲೇಖನಗಳೂ ಸಮಯೋಚಿತ. ಮುಖ್ಯವಾಗಿ ಎಚ್. ಜಿ. ರಾಮಅಯ್ಯಂಗಾರ್, ಹಾಗೂ ಕೆ. ರಮಾನಂದ ಅವರ ಲೇಖನಗಳೂ ಮನಮುಟ್ಟು ವಂತಿದ್ದವು. ಬಸವ ಜಯಂತಿಯನ್ನೂ ನೆನಪಿಸುವ ಬಸವಣ್ಣನವರ ವಚನಗಳ ಸಂಗ್ರಹ ಅರ್ಥಪೂರ್ಣ.

ರಾಮಸ್ವಾಮಿ
ಮೈಸೂರು

ಮಾನ್ಯರೆ ;

'ಆಂಜನೇಯನ ಹೆಸರಿನಲ್ಲಿ ಅಪೂರ್ವ ಕರಗ' ಆದ್ಯರಾಮಾ ಚಾರ್ಯರ ಲೇಖನ ಚೆನ್ನ. ಆದರೆ ಬೆಂಗಳೂರು, ಕೋಲಾರ, ಪೀತ ಮಂಗಲ ಇತ್ಯಾದಿ ಕಡೆಗಳಲ್ಲಿನ ಕರಗದ ಉತ್ಸವ ಹಾಗೂ ಅವುಗಳ ಮೂಲ, ವೈಶಿಷ್ಟ್ಯವನ್ನೂ ವಿವರಿಸಿದ್ದಲ್ಲಿ ಇನ್ನೂ ಹೆಚ್ಚು ಮೌಲಿಕವಾಗಿ ರುತ್ತಿತ್ತು. ಚಿತ್ರವಿದ್ದಿದ್ದಲ್ಲಿ ಇನ್ನೂ ಹೆಚ್ಚು ಆಕರ್ಷಕವಾಗುತ್ತಿದ್ದಿತು.

ಗಂಗಪ್ಪ
ಚಿಂತಾಮಣಿ



ಗೌರವ ಸಂಪಾದಕರು :
ಎಸ್. ಲಕ್ಷ್ಮೀನಾರಾಯಣ ಐ.ಎ.ಎಸ್.,

ಸಂಪಾದಕ :
ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ :
ಬಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :
ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**



ಸಂಪುಟ ೧೬] ಜೂನ್ ೧೯೮೫ [ಸಂಚಿಕೆ ೧

# ವಿಷಯಸೂಚಿ



ಮುಖ ಚಿತ್ರ : 16 ನೆಯ ವರ್ಷದಲ್ಲಿ ಸಪ್ತಗಿರಿ. ಚಿತ್ರ : ಕೆ. ಜಗದೀಶ್

ಹಿಂಬದಿಯಲ್ಲಿ : ನಾರಾಯಣವನಂ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಗರುಡೋತ್ಸವ

ಒಳಗಡೆಯಲ್ಲಿ : 1 ತಿರುಮಲೆಯಲ್ಲಿ ಉಪರಾಷ್ಟ್ರಪತಿ.
2 ಮಲೆಯಾಳ ಸ್ವಾಮಿಗಳ ಶತಮಾನೋತ್ಸವ




ಈ ಸಂಚಿಕೆಯೊಡನೆ ಸಪ್ತಗಿರಿಯಾಗಿ ಈ ಪತ್ರಿಕೆ 16ನೇ ವರ್ಷದಲ್ಲಿ ಹೆಜ್ಜೆಯಿಡುತ್ತಿದೆ. ಈ ಹಿಂದಿನ 15 ವರ್ಷದಲ್ಲಿ ಸಪ್ತಗಿರಿ ಬೆಳೆದು ಕೇವಲ ಸಂಸ್ಥಾಗತವಾದ ಪತ್ರಿಕೆಯ ಹಂತದಿಂದ ರಾಷ್ಟ್ರೀಯ ಆಧ್ಯಾತ್ಮಿಕ ಪತ್ರಿಕೆಯಾಗಿ ನಿಂತಿದೆಯೆಂದರೆ ಅದಕ್ಕೆ ಕಾರಣ ಅಧಿಷ್ಠಾನ ದೈವ ಶ್ರೀನಿವಾಸನ ಕರುಣೆ, ಪತ್ರಿಕೆಯ ಬಗ್ಗೆ ಪಾಠಕರಿಗಿರುವ ವಿಶ್ವಾಸಗಳೇ ಎಂದರೆ ಆಶ್ಚರ್ಯವಿಲ್ಲ.

ಕೇವಲ ಆಧ್ಯಾತ್ಮಿಕ ಪತ್ರಿಕೆಯಾಗಿಯೇ ಅಲ್ಲದೆ ಶ್ರೀನಿವಾಸನ ಸಂದರ್ಶನಕ್ಕೆ ಬರುವ ಸಾವಿರಾರು ಮಂದಿ ಭಕ್ತರ ವಾಹನ, ವಸತಿ, ದರ್ಶನ ಸೌಕರ್ಯಗಳನ್ನು ಹಸನುಗೊಳಿಸುವಲ್ಲಿ ಅವಕಾಶ ದೊರೆತಿರುವುದು ಸಪ್ತಗಿರಿಗೆ ತೃಪ್ತಿಕರ ಸಂಗತಿ. ರೈಲು, ವಿಮಾನ ಪ್ರಯಾಣಗಳ ವಿಷಯದಲ್ಲಿ ಸಪ್ತಗಿರಿಯ ಪಾತ್ರ ಹಲವರ ಪ್ರಶಂಸೆಯನ್ನು ಪಡೆದಿದೆ. ಹಲವಂಶಗಳಲ್ಲಿ ಸಪ್ತಗಿರಿಯ ಸಲಹೆಗಾಗಿ ನಿರೀಕ್ಷಿಸುವವರ ಸಂಖ್ಯೆ ಹೆಚ್ಚುತ್ತಿರುವುದು, ಒಂದು ರೀತಿಯಲ್ಲಿ ಸಪ್ತಗಿರಿ ವಿಧಿನಿರ್ವಹಣೆಯ ವಿಧಾನ ಸಕ್ರಮವಾಗಿದೆಯೆನ್ನುವ ತೃಪ್ತಿಗೆ ನಿದರ್ಶನ.

ಇನ್ನು ಆಧ್ಯಾತ್ಮಿಕ ರಂಗದಲ್ಲಿ ಪತ್ರಿಕೆ ಹುಟ್ಟಿದಾಗಿನಿಂದ ಹಲವು ಮೌಲಿಕ ಸೂತ್ರಗಳನ್ನು ಎಚ್ಚರಿಕೆಯಿಂದ ಅನುಸರಿಸುತ್ತಿದೆ. ಶ್ರೀನಿವಾಸ ಸಾಮ್ರಾಜ್ಯ ವಿಶೇಷಗಳೊಂದಿಗೆ ಆರ್ಷ ವಿಜ್ಞಾನ ಸುಧಾ ಸ್ರವಂತಿಯನ್ನು ಸರ್ವರಿಗೂ ಸುಲಭಗೊಳಿಸುವಲ್ಲಿ ಸಪ್ತಗಿರಿ ಗೀತಾಚಾರ್ಯನು ಹೇಳಿದ

ಯೇ ಯಥಾ ಮಾಂ ಪ್ರಪದ್ಯಂತೇ
ತಾಂ ಸ್ತಥೈವ ಭಜಾಮ್ಯಹಂ

ಎನ್ನುವ ಸೂತ್ರವನ್ನು ಅನುಸರಿಸುತ್ತ ಶ್ರೀಮನ್ನಾರಾಯಣೀಯಾರಾಧನೆಯೊಡನೆ, ವಿಶಾಲಾನಂತ ಆಧ್ಯಾತ್ಮಿಕ ವಿಶ್ವದ ಧ್ರುವ ತಾರೆಗಳನ್ನು ಕುರಿತ ವಿಶೇಷಗಳನ್ನೂ, ಆಯಾ ವರ್ಗಗಳ ಪರಿತುಷ್ಟಿಗಾಗಿ ನೀಡಲಾಗುತ್ತಿದೆ. ಆಯಾ ಸಂದರ್ಭಗಳಲ್ಲಿ ಆಯಾ ದೈವತಗಳ ವೈಭವ ಪ್ರಭಾವಗಳನ್ನು ಪ್ರಕಾಶಪಡಿಸುತ್ತ 'ನಹಿ ನಿಂದಾ ನ್ಯಾಯ'ವನ್ನು ಅನುಸರಿಸುತ್ತ ಬಂದಿದೆ.

ಆಕಾಶಾತ್ಪತಿತಂ ತೋಯಂ
ಯಥಾಗಚ್ಛತಿ ಸಾಗರಂ
ಸರ್ವದೇವ ನಮಸ್ಕಾರಃ
ಕೇಶವಂ ಪ್ರತಿಗಚ್ಛತಿ

ಎಲ್ಲರ ವಿಶ್ವಾಸ, ಗಮ್ಯವೂ ಸಹ 'ಅ ಪುನರಾವೃತ್ತಿರಹಿತಸ್ಥಿತಿ' ತಲುಪುವುದೇ ಆಗಿರುವುದರಿಂದ ಆಯಾ ಮಾರ್ಗಗಳನ್ನು ಯಥಾಶಕ್ತಿ ಪ್ರಕಾಶನಗೊಳಿಸಲಾಗುತ್ತಿದೆ. ಹೀಗಾಗಿ ಸಪ್ತಗಿರಿಯ ಇಂದಿನ ಅಭಿಮಾನಿಗಳಲ್ಲಿ ವಿಧರ್ಮೀಯರೂ ಸೇರಿ ಆರ್ಷವಿಜ್ಞಾನ ಜಿಜ್ಞಾಸುಗಳಾಗುತ್ತಿದ್ದಾರೆ ಎನ್ನಬಹುದು

ನಡೆದದ್ದಕ್ಕಿಂತ ನಡೆಯಬೇಕಾದ ದೂರವೇ ಹೆಚ್ಚು. ಏರುಪೇರುಗಳ ಈ ಹಾದಿಯಲ್ಲಿ ಎಷ್ಟು ಎಚ್ಚರದಿಂದ ನಡೆದರೂ ಅಲ್ಲಲ್ಲಿ ಹೆಜ್ಜೆ ತಪ್ಪುತ್ತಿರುವವೇನೋ ಎಂಬ ಅನುಮಾನ ಇಲ್ಲದಿರದು. ಇಂತಲ್ಲಿ ಓದುಗರೇ ಮಾರ್ಗದರ್ಶಿಗಳು.

ಮೂಲಸತ್ಯವೆಂದರೆ ನಡೆಗೆ, ನಡತೆಗೆ ಮೂಲ ಆ ಶ್ರೀನಿವಾಸನೇ. ನಡೆಯುವುದೇ ನಮ್ಮ ಕರ್ತವ್ಯ.

ಅಷ್ಟಚಕ್ರಾ ನವದ್ವಾರಾ
ದೇಹಿನಾಂ ಪುರಯೋಧ್ಯಾ ।
ತಸ್ಯಾಂ ಹಿರಣ್ಮಯಃ
ಕೋಶಃ ಸ್ವರ್ಗೋ ಜ್ಯೋತಿಷಾವೃತಃ ॥

– ಎಂಬುದು ವೇದವಮಂತ್ರ,ಅಷ್ಟೇ ಅಲ್ಲ ;

ಅಯೋಧ್ಯಾ ಮಥುರಾ ಮಾಯಾ
ಕಾಶೀ ಕಾಂಚೀಯವಂತಿಕಾ ।
ಪುರೀದ್ವಾರಾವತೀ ಚೈವಾ
ಸಪ್ತೈತೇ ಮೋಕ್ಷದಾಯಕಾಃ ॥

ಎಂಬುದು ಆರ್ಯಭಾವನೆ. 'ಅಯೋಧ್ಯಾಪುರಿ ಮಸ್ತಕೇ' ಎನ್ನುವ ನಾಣ್ನುಡಿ ಬಹುಪ್ರಚಾರ ದಲ್ಲಿದೆ. ಪರಶಿವನು ಪಾರ್ವತಿಯೊಡನೆ 'ಪಾವನ ವಾದ ಸರಯೂನದೀತೀರದ ಅಯೋಧ್ಯೆಯನ್ನು ಬ್ರಹ್ಮನು ಬುದ್ಧಿಯಿಂದಲೂ, ವಿಷ್ಣುವು ಚಕ್ರ ದಿಂದಲೂ, ನಾನು ತ್ರಿಶೂಲದಿಂದಲೂ ರಕ್ಷಿಸುತ್ತಿ ರುತ್ತೇವೆ' ಎಂದು ಹೇಳುವನು, ಅಯೋಧ್ಯೆ ಎಂಬ ಶಬ್ದ ತ್ರಿಗುಣಾತ್ಮಕವಾದದ್ದು ಎಂದು ಮಹರ್ಷಿಗಳು ಭಾವಿಸಿದರು.

ಅ ಕಾರೋ ಬ್ರಹ್ಮರೂಪ ಶ್ಚ
ಯಕಾರೋ ವಿಷ್ಣುರೂಪ ಶ್ಚ ।
ಧಕಾರೊ ರುದ್ರರೂಪಶ್ಚ
ಅಯೋಧ್ಯಾ ನಾಮ ರಾಜತೇ ॥

ಅಥರ್ವವೇದವು ಅಯೋಧ್ಯೆಯನ್ನು ಬ್ರಹ್ಮಲೋಕ ಇಂದ್ರಲೋಕ, ವಿಷ್ಣುಲೋಕ, ಗೋಲೋಕ ಮೊದಲಾದ ಸರ್ವವೈಕುಂಠಗಳಿಗೂ ಮೂಲಾ ಧಾರವೆಂದು ಭಾವಿಸಿತು.

ಯಾ ಯಯೋಧ್ಯಾ ಪುಃ
ಸಾ ಸರ್ವ ವೈಕುಂಠಾ
ಸ್ವೈವ ಮೂಲಾಧಾರ ಮೂಲಪ್ರಕೃತೇ
ಪರಾ ತತ್ಸತ್ ಬ್ರಹ್ಮಮಯಾ
ವಿರಜೋತ್ತರಾ ದಿವ್ಯ ರತ್ನಕೋಶಾಢ್ಯಾ
ತಸ್ಯಾಂ ನಿತ್ಯಮೇವ
ಸೀತಾರಾಮಯೋಃ ವಿಹಾರಸ್ಥಲಮಸ್ತಿ

ತನ್ನಲ್ಲಿ ತಾನು ಅವಿರ್ಭೂತವಾದ ನಗರವಾದದ್ದ ರಿಂದ ಅಯೋಧ್ಯೆಯನ್ನು ಸಾಕೇತವೆಂದು ಕರೆಯುತ್ತಾರೆ.

"ಸ್ವಯಮಾಗತ ಸ್ವಯ
ಮಾಗತ ಸ್ವಯಮಾಗತೇತಿ
ಸಾಕೇತ ಸಾಕೇತ ಸಂಜ್ಞಾ..."

ಅವಂತಿಕಾನಗರವನ್ನು ವಿಷ್ಣು ಭಗವಾನನ ಪಾದ ವೆಂದು, ಕಾಂಚೀಪುರವನ್ನು ಕಟಿಯೆಂದೂ ದ್ವಾರಕೆ ಯನ್ನು ನಾಭಿಯೆಂದೂ, ಹರಿದ್ವಾರವನ್ನು ಹೃದಯವೆಂದೂ ಮಥುರೆಯನ್ನು ಭುಜವೆಂದೂ ಕಾಶಿಯನ್ನು ನಾಸಿಕವೆಂದೂ ವರ್ಣಿಸಿದ ಮಹರ್ಷಿ ಗಳು ಅಯೋಧ್ಯೆಯನ್ನು ಮಸ್ತಕವೆಂದು ಭಾವಿಸಿ ಅಷ್ಟನಾಮಗಳಿಂದ ಆರಾಧಿಸಿದರು.

ವರೇಣ್ಯಾಂ ಸರ್ವಲೋಕಾನಾಂ
ಹಿರಣ್ಯಾ ಚಿನ್ಮಯಾ ಜಯಾ ।
ಅಯೋಧ್ಯಾ ನಂದಿನೀ ಸತ್ಯಾ
ರಾಜಿತಾ ಅಪರಾಜಿತಾ ॥

ಈ ಸಾಕೇತ ನಗರ ವಿಷ್ಣುವಿನ ಗೋಲೋಕದ ಹೃದಯ.

ಕಲ್ಯಾಣೀ ರಾಜಧಾನೀ ಯಾ
ತ್ರಿಪಾದಸ್ಯ ನಿರಾಶ್ರಯಾ ।
ಗೋಲೋಕ ಹೃದಯ ಸ್ಥಾನಂ
ಸಂಸ್ಥಾ ಸಾ ಸಾಕೇತಪುರೀ ॥



# ತೀರ್ಥಕ್ಷೇತ್ರ ದರ್ಶನ

## ಅಯೋಧ್ಯೆ

ಈ ಅಯೋಧ್ಯೆ ಭಾರತದೇಶದಲ್ಲಿ 26,27 ಉತ್ತರ ಅಕ್ಷಾಂಶರೇಖೆ, ಹಾಗೂ 82.15 ಪೂರ್ವ ರೇಖಾಂಶಗಳಲ್ಲಿದೆ. ಲಕ್ನೋ, ಅಲಹಾಬಾದ್, ಕಾಶಿಗಳಿಂದ ಪ್ರಯಾಣ ಸೌಕರ್ಯಗಳಿವೆ.

ಅಯೋಧ್ಯೆಯ ಚರಿತ್ರೆ: ಅಯೋಧ್ಯೆಯನ್ನು ಸೂರ್ಯವಂಶದ ರಾಜರು ಯುಗ ಯುಗಗಳಿಂದ ಪರಿಪಾಲಿಸುತ್ತ ಬಂದರು. ವೈವಸ್ವತ ಮನುವಿ ನಿಂದ ಆರಂಭಿಸಿ ಎರಡನೆ ಸುಮಿತ್ರನವರೆಗೆ 125 ಮಂದಿ ರಾಜರಾಗಿಹೋದರು. ಅವರಲ್ಲಿ ಶ್ರೀರಾಮನು 64 ನೆಯ ಪ್ರಭು. ಕೊನೆಯ ಚಕ್ರವರ್ತಿಯಾದ ಎರಡನೆ ಸುಮಿತ್ರನು ಮಹಾ ನಂದನಿಂದ ಹತನಾದ.

ಶ್ರೀರಾಮಾವತಾರದ ನಂತರ ಅಯೋಧ್ಯಾ ನಗರ ಪೂರ್ಣವಾಗಿ ಸರಯೂನದಿಯ ಪ್ರವಾಹ ದಲ್ಲಿ ಕರಗಿ ಹೋಯಿತು, ಸಹಸ್ರ ವರ್ಷಗಳಕಾಲ ಘೋರಾರಣ್ಯವಾಗಿದ್ದಿತು. ದ್ವಾಪರ ಯುಗಾರಂಭ ದಲ್ಲಿ ಶ್ರೀರಾಮನ ಮಗ ಕುಶ ಹಾಗೂ ಮಧ್ಯ ಕಾಲದಲ್ಲಿ ಋಷಭಚಕ್ರವರ್ತಿ ಈ ನಗರವನ್ನು ಪುನರ್ನಿಮಿಸಿರಬೇಕೆಂದು ಇತಿಹಾಸಜ್ಞರು ಭಾವಿಸುತ್ತಿದ್ದಾರೆ. ಸೂರ್ಯವಂಶದ 118ನೆಯ ಚಕ್ರವರ್ತಿಯಾದ ಶುದ್ಧೋದನನು ಅಯೋಧ್ಯೆ ಯನ್ನು ಬಿಟ್ಟು ಸರಯೂ ನದಿಯ ಉತ್ತರ ದಿಗ್ಭಾ ಗದ ಶ್ರಾವಸ್ತಿ ನಗರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದ. ಆತನ ಮಗ ಸಿದ್ಧಾರ್ಥನು ಹದಿನಾರು ವರ್ಷಗಳವರೆಗೆ ಅಯೊ

ಮೂಲ: ಶೇಕ್ ಮೌಲಾಲೀ
ಅನುವಾದ: ಬಿ. ಎನ್. ಎಸ್.


ವಾಲ್ಮೀಕಿ ಭವನ



ರತ್ನ ಸಿಂಹಾಸನ ಮಂದಿರ

ಥ್ಯೆಯಲ್ಲಿಯೇ ಬೆಳೆದ. ನಂತರ ಬಹುಕಾಲದವರೆಗೆ ಅಯೋಧ್ಯೆಯು ಪ್ರಾಧಾನ್ಯ ಕಳೆದುಕೊಂಡಿತು.

ಬಹುಕಾಲದ ನಂತರ ಗಂಧರ್ವಸೇನನ ಕುಮಾರನಾದ ವಿಕ್ರಮಾದಿತ್ಯನು ರಾಮಾಯಣ ಕಥೆಯಿಂದ ಪ್ರೇರಿತನಾಗಿ ಶ್ರೀರಾಮನ ನಗರವಾದ ಅಯೋಧ್ಯೆಯನ್ನು ಅನ್ವೇಷಿಸಿಕೊಂಡು ಮಾನಸ ಸರೋವರದಿಂದ ಸರಯೂನದಿಯ ದಡದಲ್ಲೇ ಹೊರಟು ಕಡೆಗೆ ವಿಶಾಖವನವನ್ನು ತಲುಪಿದ. ಒಂದು ಪ್ರಾತಃಕಾಲ ಕಪ್ಪುಕುದುರೆಯನ್ನೇರಿ ಬಂದ ಪ್ರಯಾಗದೇವನು ವಿಕ್ರಮಾದಿತ್ಯನಿಗೆ ಆ ಸ್ಥಳವೇ ಅಯೋಧ್ಯೆಯೆಂದೂ, ಅದನ್ನು ಪುನರುದ್ಧರಿಸಬೇಕೆಂದೂ ಆದೇಶಿಸಿದ.

ವಿಕ್ರಮಾದಿತ್ಯನು ಪ್ರಯಾಗದೇವನ ಹಿಂದೆ ಹೊರಟು, ಆ ಕಾಲದ ಐತಿಹಾಸಿಕ ಪ್ರದೇಶಗಳಲ್ಲಿ ತನ್ನ ಗುರಾಣಿಯಿಂದ 360 ಸ್ಥಳಗಳನ್ನು ಗುರುತಿಸಿದ. ಆರು ವರ್ಷಗಳಲ್ಲಿ ಅಯೋಧ್ಯೆಯನ್ನು ಪೂರ್ವದಂತೆಯೇ ನಿರ್ಮಿಸಿದ. ಯುಧಿಷ್ಠಿರ ಶಕ 2426ರಲ್ಲಿ ಆರಂಭವಾದ ಈ ನಿರ್ಮಾಣಕಾರ್ಯ 2432ರಲ್ಲಿ ಪೂರ್ಣವಾಯಿತು. ವಿಕ್ರಮಾದಿತ್ಯನು ಮಾಡಿದ ಮಹಾಕಾರ್ಯವು ವಿಶ್ವವಿಖ್ಯಾತವಾಗಿ ಅಂದಿನಿಂದ ( ಯುಧಿಷ್ಠಿರ ಶಕೆ 2432 ರಿಂದ ) ವಿಕ್ರಮಶಕೆ ಆರಂಭವಾಯಿತು. ಒಂದು ಕಾಲಕ್ಕೆ 30 ಯೋಜನ ಉದ್ದ 12 ಯೋಜನ ಅಗಲ ವ್ಯಾಪ್ತಿಹೊಂದಿದ ಅಯೋಧ್ಯಾನಗರದ ಭವ್ಯತೆಯನ್ನು ಕವಿವಾಲ್ಮೀಕಿ ಸೀತಾರಾಮಕಲ್ಯಾಣ ಚಿತ್ರಣದ ನಂತರ ಹೀಗೆ ವರ್ಣಿಸಿದ್ದಾನೆ.

ಪತಾಕಾ ಧ್ವಜಿನೀಂ ರಮ್ಯಾಂ
ತೂರ್ಯೋದ್ಘುಷ್ಟ ನಿನಾದಿತಾಮ್ ।
ಸಿಕ್ತ ರಾಜಪಥಾಂ ರಮ್ಯಾಂ
ಪ್ರಕೀರ್ಣ ಕುಸುಮೋತ್ಕರಾಮ್ ॥

ದರ್ಶನೀಯ ಸ್ಥಳಗಳು :– ಅಯೋಧ್ಯಾ ನಗರದಲ್ಲಿ ಐದು ಸಾವಿರಕ್ಕೂ ಹೆಚ್ಚಿನ ದೇವಾಲಯಗಳಿವೆ. ಪ್ರತಿ ಮನೆಯಲ್ಲೂ ಒಂದು ದೇವಾಲಯವಿದೆ. ಅವು ಮನೆಗಳಲ್ಲ, ಮಂದಿರಗಳು. ಇನ್ನೂ ಹೇಳಬೇಕೆಂದರೆ ಇಲ್ಲಿನ ಜನ ಮಂದಿರಗಳಲ್ಲಿ ಶ್ರೀರಾಮ ಭಜನೆ ಮಾಡುತ್ತಾ ಪಕ್ಕದ ಕೋಣೆಯಲ್ಲಿ ಕಾಲ ಕಳೆಯುತ್ತಾರೆ. ಈ ಜಗತ್ತೆಲ್ಲ ಸೀತಾರಾಮಮಯವೆಂದು ಅವರ ಭಾವನೆ. ಹಾಗಾಗಿ ತಮ್ಮದೆಂಬುದು ಏನೂ ಇರದು. "ರಾಮಸ್ಯಾರ್ಥೇ ಸರ್ವಂ ತ್ಯಜೇತ್" ಎಂಬುದು ಅವರ ಭಾವ. ಪ್ರಧಾನವಾಗಿ 1500 ಮಂದಿರಗಳನ್ನು ನೋಡಬಹುದು. ಆದರೆ ಎಲ್ಲವನ್ನೂ ತೃಪ್ತಿಯಿಂದ ನೋಡಬೇಕೆಂದರೆ ಮೂರು ತಿಂಗಳ ಅವಧಿ ಬೇಕಾದೀತು. ಹಾಗಾಗಿ ತಪ್ಪದೇ ನೋಡಬೇಕಾದುವುಗಳನ್ನು ವಿವರಿಸುತ್ತೇನೆ.

ಮಖ ಭೂಮಿ – ದಶರಥಮಹಾರಾಜ ಪುತ್ರಕಾಮೇಷ್ಟಿ ನಡೆಸಿದ ಸ್ಥಳವನ್ನು ಮಖ ಭೂಮಿಯೆನ್ನುವರು. ಇದು ಅಯೋಧ್ಯೆಗೆ 10 ದೂರದಲ್ಲಿ ಸರಯೂ ಹಾಗೂ ಮನೋರಮಾ ನದಿಗಳ ಮಧ್ಯೆಯಿದೆ. ಚೈತ್ರ ಶುದ್ಧ ಪೂರ್ಣಿಮೆಯದಿನ ಇಲ್ಲಿ ಮಹೋತ್ಸವ ನಡೆಯುತ್ತದೆ. ಇಲ್ಲಿನ ರಜವನ್ನು ತುಸು ತಿಂದವರಿಗೆ ಸಂತಾನವುಂಟಾಗುವದೆಂಬ ಪ್ರಗಾಢ ವಿಶ್ವಾಸ ಜನರಲ್ಲಿದೆ. ಭರತನು ಜನಿಸಿದ ಕೈಕೇಯಿ ಭವನ್, ಲಕ್ಷ್ಮಣ ಶತ್ರುಘ್ನರು ಜನಿಸಿದ ಸುಮಿತ್ರಾ ಭವನ್ ಅಯೋಧ್ಯೆಯಲ್ಲಿವೆ. ನಾಲ್ವರು ಸೋದರರು ಬಾಲ್ಯದಲ್ಲಿ ಕ್ರೀಡಿಸಿದ ಪ್ರಾಂತ್ಯದಲ್ಲಿ ಆನಂದ ಭವನವಿದೆ. ಮಹಾಕವಿ ತುಲಸೀದಾಸ ;

ಲರಿಕಿಯಾ ಜಹಾ ಜಹಾ ಫಿರಿಹಾ
ತಹಾ ತಹಾ ಸಂಗ ವುಡಾವೂ ।
ಜೂಟನ್ ಗಿರೈ ಅಜಿರ ಮಹ
ಸೋ ಉಠಾಯ ಪೈ ಖಾವೂ ॥

( ನಾಲ್ವರು ಸೋದರರು ಬಾಲಕ್ರೀಡೆಗಳನ್ನು ಪ್ರದರ್ಶಿಸಿದ ಸ್ಥಳದಲ್ಲಿ ಅವರ ಎಂಜಲು ತಿನ್ನುತ್ತ ತಾನು ತಿರುಗಾಡುತ್ತಿದ್ದೆ ಎಂದು ಕಾಕಭುಶುಂಡಿ ಗರುಡನಿಗೆ ರಾಮ ಕಥೆಯನ್ನು ವಿವರಿಸುತ್ತಾನೆ ) ಎಂದು ಹೇಳುತ್ತಾನೆ. ಇದನ್ನೇ ರಂಗ ಮಹಲ್ ಎಂದು ಕರೆಯುತ್ತಾರೆ.

ಶ್ರೀರಾಮ ಜನ್ಮ ಭೂಮಿ :– 8,72,64 ವರ್ಷಗಳ ಹಿಂದೆ ಶ್ರೀರಾಮಚಂದ್ರನು ಅವತ ಸಿದ ಸ್ಥಳವಿದು. ವಾಲ್ಮೀಕಿ ಮಹರ್ಷಿ ಶ್ರೀರಾಮ ಜನನವನ್ನು –

ನಕ್ಷತ್ರೇ ಅದಿತಿ ದೈವತ್ಯೇ
ಸ್ವೋಚ್ಚ ಸಂಸ್ಥೇಷು ಪಂಚಸು ।
ಗ್ರಹೇಷು ಕರ್ಕಟೇ ಲಗ್ನೇ
ವಾಕ್ಪತಾ ವಿಂದುನಾ ಸಹ ॥

ಪ್ರೋದ್ಯಮಾನೇ ಜಗನ್ನಾಥಂ
ಸರ್ವಲೋಕ ನಮಸ್ಕೃತಮ್ ।
ಕೌಸಲ್ಯಾ ಜನಯದ್ರಾಮಮ್
ಸರ್ವ ಲಕ್ಷಣ ಸಂಯುತಮ್ ॥

ಎಂದು ವರ್ಣಿಸಿದ್ದಾನೆ.

ವಿಕ್ರಮಾದಿತ್ಯ ಚಕ್ರವರ್ತಿ ಶ್ರೀರಾಮ ಜನ ಭೂಮಿಯಲ್ಲಿ ಸ್ಫಟಿಕ ಶಿಲೆಗಳಿಂದ ಒಂದು ದಿ ಮಂದಿರವನ್ನು ನಿರ್ಮಿಸಿದ. ಕನೋಜದ ರಾ ಜಯಚಂದ್ರ ಅದರ ಜೀರ್ಣೋದ್ಧಾರ ಮಾಡಿಸಿ ಮೊಗಲ್ ಸಾಮ್ರಾಟ ಬಾಬರನು ಕ್ರಿ. ಶ.152



ಸೀತಾ ರಸೋಯಿ



ಭರತ ಜನ್ಮಭೂಮಿ



ಕನಕ ಭವನ

ರಲ್ಲಿ ಜಲಾಲ್‌ಷಹನೆಂಬ ಫಕೀರನ ಆದೇಶಾನು ಸಾರ ಈ ದೇವಾಲಯವನ್ನು ಧ್ವಂಸಮಾಡಿ ಅದರ ಮೇಲೊಂದು ಮಸೀದಿಯನ್ನು ನಿರ್ಮಿಸಿದ. ಬಾಬಾಶ್ಯಾಮಾನಂದ ಎನ್ನುವ ಭಕ್ತನು ಶ್ರೀರಾಮಚಂದ್ರನ ವಿಗ್ರಹವನ್ನು ಎತ್ತಿಕೊಂಡು ಉತ್ತರಖಂಡಕ್ಕೆ ಹೊರಟುಹೋದ. ಹಿಂದೂಗಳು ಅಂದಿನಿಂದ ಧಾರ್ಮಿಕ ಸತ್ಯಾಗ್ರಹವನ್ನು ನಡೆಸು ತ್ತಲೇ ಬಂದಿದ್ದಾರೆ. ಜನ್ಮ ಭೂಮಿ ಮುಕ್ತಿಯಜ್ಞ ದಲ್ಲಿ ಮೂರು ಲಕ್ಷ ಮಂದಿ ಪ್ರಾಣ ನೀಡಿದ್ದಾರೆ. ಒಟ್ಟು 78 ಬಾರಿ ಈ ಮಂದಿರದ ಮೇಲೆ ಧಾಳಿಗ ಳಾಗಿವೆ.

ಚೈತ್ರಮಾಸೇ ಸಿತೇಪಕ್ಷೇ
ನವಮ್ಯಾಂ ಚ ಪುನರ್ವಸೌ ।
ಮಧ್ಯಾಹ್ನೇ ಕರ್ಕಟೇ ಲಗ್ನೇ
ಜಾತೋ ರಾಮಃ ಸ್ವಯಂ ಹರಿಃ ॥

ಎಂದು ಅಭಿವರ್ಣಿಸಲ್ಪಟ್ಟಿರುವ ಕಲ್ಯಾಣರಾಮನು ಪ್ರಸ್ತುತ ಕಬ್ಬಿಣದ ಸರಳುಗಳಲ್ಲಿದ್ದಾನೆ. ಅರ್ಚಕ ಮಾತ್ರ ಒಳಕ್ಕೆ ಹೋಗಿ ಅರ್ಚನೆ ಮಾಡಿ ಬರು ತ್ತಾನೆ. ಯಾತ್ರಿಕರು ಹೊರಗಿನಿಂದ ಮಾತ್ರವೇ ದರ್ಶನ ಮಾಡಿಕೊಳ್ಳಬೇಕು. ಜನ್ಮ ಭೂಮಿ ಮುಕ್ತಿಗಾಗಿ 27–10–1949 ರಿಂದ ಇಲ್ಲಿ ನಿರಂತರವಾಗಿ ರಾಮಸಂಕೀರ್ತನಯಜ್ಞ ನಡೆ ಯುತ್ತಿದೆ. 7–10–84 ರಂದು ಸರಯೂ ನದಿಯ ದಡದಲ್ಲಿ ಸುಮಾರು ಐದು ಲಕ್ಷ ಮಂದಿ ಆಸ್ತಿಕರು ಶ್ರೀರಾಮ ಜನ್ಮಭೂಮಿಯ ಮುಕ್ತಿ ಗಾಗಿ ದೀಕ್ಷೆ ಹೊಂದಿದರು. (1985 ಶ್ರೀರಾಮ ನವಮಿಯ ಕಾಲದಲ್ಲಿ ದೇಶಾದ್ಯಂತ ಸರದಿ ಉಪ ವಾಸ ಮುಷ್ಕರಗಳೂ ನಡೆದವು.)

ಶ್ರೀರಾಮ ಜನ್ಮ ಭೂಮಿಗೆ 120 ಅಡಿ ದೂರ ದಲ್ಲಿ [ಸೀತಾಕೂಪ (ಸೀತಾದೇವಿಯು ಪೂಜಿಸಿದ ಬಾವಿ) ಇದೆ.

ಕನಕ ಭವನ :

ಸೀತಾರಾಮ ಕಲ್ಯಾಣದ ನಂತರ ಕೈಕೇಯಿ ಸೀತೆಗೆ ಕಾಣಿಕೆಯಾಗಿ ನೀಡಿದ ಭವನವೇ ಕ ನ ಕ ಭವನ. ಮಹಾರಾಜನಿಗೆ ಮತ್ತು ನಾ ಲ್ವ ರು ಸೋದರರಿಗೆ ಸೀತೆ ಅಡುಗೆ ಮಾ ಡಿ ಬ ಡಿ ಸಿ ದ ಮಂದಿರವನ್ನು ಸೀತಾ ರಸೋಯಿ (ಸೀತೆಯ ಪಾಕಶಾಲೆ) ಎಂದು ಕರೆಯುತ್ತಾರೆ. ಕನಕಭವನದ ಹತ್ತಿರದಲ್ಲಿಯೇ ಶ್ರೀರಾಮನ ರತ್ನ ಸಿಂಹಾಸನ ಮಂದಿರ, ಇಚ್ಛಾಭವನ, ಹನುಮಾನ್ ಗುಡಿ ಇವೆ. ಕೋಪಭವನವೆನ್ನುವುದು ಮಂಥರೆಯ ಚಾಡಿ ಮಾತುಗಳನ್ನು ಕೇಳಿ ಕೈಕೇಯಿ ಪ್ರವೇ ಶಿಸಿದ ಮಂದಿರ. ಈ ಮಂದಿರಲ್ಲಿ ಕೋಪೋದ್ರಿಕ್ತ ಳಾದ ಕೈಕೇಯಿ ಶಯನಿಸಿರುವಳು. ಉದಾಸೀ ನನಾದ ದಶರಥನು ಸಮೀಪದಲ್ಲೇ ಕುಳಿತಿರು ತ್ತಾನೆ. ದಶರಥನ ಅನುಮತಿ ಕೇಳುತ್ತಿರುವಂತೆ ರಾಮ ಲಕ್ಷ್ಮಣರು ಬದಿಯಲ್ಲಿ ನಿಂತಿರುತ್ತಾರೆ.

ನಂದಿಗ್ರಾಮ :

ಶ್ರೀರಾಮ ವಿಯೋಗದಿಂದ ಭರತ 14 ಸಂವ ತ್ಸರ ಕಾಲ ತಪಸ್ಸು, ರಾಜ್ಯಾಡಳಿತ ಮಾಡಿದ ನಂದಿಗ್ರಾಮ, ಅಯೋಧ್ಯೆಗೆ 14 ಮೈಲು ದೂರ ದಲ್ಲಿ ದಕ್ಷಿಣಕ್ಕಿದೆ. ಕಾಶಿ ಪ್ರಯಾಗಗಳಿಗಿಂತ ಈ ಕ್ಷೇತ್ರ ದಿವ್ಯವಾದದ್ದು ಎಂದು ಕೆಲವರ ನಂಬಿಕೆ.

ಹೀಗೆ ಇನ್ನೂ ಎಷ್ಟೋ ಮಂದಿರಗಳು ... ...



ಅಯೋಧ್ಯಾ ನಗರ

ಶೇಷಾವತಾರಿಯಾದ ಶ್ರೀಲಕ್ಷ್ಮಣ ಸ್ವಾಮಿಯ ಮಂದಿರವನ್ನು ಲಕ್ಷ್ಮಣ ಕಿಲಾ ಎನ್ನುತ್ತಾರೆ. ಸುಳ್ಳು ಹೇಳುವವರಿಂದ ಇಲ್ಲಿ ಪ್ರಮಾಣ ಮಾಡಿಸುತ್ತಾರೆ. ಇಲ್ಲಿ ಅಸತ್ಯವನ್ನಾಡಿದರೆ ಅಪಾರವಾದ ಹಾನಿಯುಂಟಾಗುವದೆಂಬ ಪ್ರತೀತಿಯಿದೆ. ನಾಗೇಶ್ವರನಾಥ, ತ್ರೇತಾನಾಥ, ಕಾಲೇರಾಮ್, ವಾಸುದೇವ, ಧರ್ಮಹರಿ, ಸ್ವರ್ಗದ್ವಾರ, ಗುಪ್ತಹರಿ, ಮೊದಲಾದ ತೀರ್ಥಗಳಿವೆ.

ಸರಯೂ ನದಿದಡದಲ್ಲಿ ಅಯೋಧ್ಯೆಗೆ ಪೂರ್ವದಲ್ಲಿ 18 ಕಿ. ಮೀ. ದೂರದಲ್ಲಿ ಭರತನ ಧರ್ಮಪತ್ನಿ ಮಾಂಡವಿ ಹದಿನಾಲ್ಕು ವರ್ಷ ತಪಸ್ಸನ್ನಾಚರಿಸಿದ "ಮಂಡನಾ" ತೀರ್ಥವಿದೆ. ಹನುಮಂತನ ಕೃಪೆಗೆ ಪಾತ್ರನಾಗಿದ್ದ ಲಕ್ನೋ ರಾಜ ಮನ್ಸೂರ್ ಅಲಿಖಾನ್ ನಿರ್ಮಿಸಿದ ಮಂದಿರವನ್ನು ಹನುಮಾನ್‌ಗುಡಿ ಎಂದು ಕರೆಯುತ್ತಾರೆ. ಸುಮಾರು ಕೋಟಿ ರೂಗಳ ವೆಚ್ಚದಲ್ಲಿ ನಿರ್ಮಾಣವಾಗಿರುವ ಶ್ರೀವಾಲ್ಮಿಕಿ ಭವನವನ್ನೂ ನೋಡಬಹುದು. ಹಾಲುಗಲ್ಲಿನಲ್ಲಿ ನಿರ್ಮಾಣವಾಗಿರುವ ಈ ಭವನದ ಕುಡ್ಯಗಳಲ್ಲ ವಾಲ್ಮಿಕಿ ರಾಮಾಯಣವನ್ನು ದೇವನಾಗರೀ ಲಿಪಿಯಲ್ಲಿ ಕೆತ್ತಲಾಗಿದೆ. ಸೀತಾರಾಮರ ಕ್ರೀಡಾಸ್ಥಳವಾದ ಮಣಿಪರ್ವತ ನಂತರದ ಕಾಲದಲ್ಲಿ, ಗೌತಮ ಬುದ್ಧನ ತಪೋವನವಾಯಿತು. ಈ ಪರ್ವತದ ಬಳಿಯಲ್ಲೇ ಪೂರ್ವದಿಕ್ಕಿನಲ್ಲಿ ರಾಮಸ್ವಾಮೀ ವೃಕ್ಷವಿದೆ. ಈ ವೃಕ್ಷದ ಮೇಲೆಲ್ಲ ರಾಮನಾಮ ಕಂಡು ಬರುತ್ತದೆ. ಈ ಗಿಡದ ಎಲೆಗಳ ರಸದಿಂದ ನೇತ್ರದೋಷ ದೂರವಾಗುವುದು. ಇವಲ್ಲದೆ ಶ್ರೀರಾಮ ಗುರುಪೀಠ, ಬೌದ್ಧ ತಪೋಭೂಮಿಗಳೂ ಇವೆ. ಗುರುನಾನಕರಿಂದ ಆರಂಭಿಸಿ ಗುರುಗೋವಿಂದ ಸಿಂಗರವರಗೆ ಹತ್ತು ಮಂದಿ ಸಿಖ್ ಗುರುಗಳೂ ಅಯೋಧ್ಯೆಯನ್ನು ದರ್ಶಿಸಿದ ಆಧಾರಗಳಿವೆ. ರಾಮ ಸರೋವರ, ಸತೀಕುಂಡ, ಸೂರ್ಯಕುಂಡ ಮೊದಲಾದ 24 ದಿವ್ಯ ಸರೋವರಗಳಿಂದ ಒಂದು ಕಾಲದಲ್ಲಿ ಕಂಗೊಳಿಸುತ್ತಿದ್ದಿತಾದರೂ ಇಂದು ಕೆಲವೇ ಉಳಿದಿವೆ.

ಸರಯೂನದಿ : ಅಯೋಧ್ಯಾನಗರದ ಪೂರ್ವ ಪಶ್ಚಿಮ ಉತ್ತರ ದಿಶೆಗಳಲ್ಲಿ ಪರಮಪಾವನವಾದ ಸರಯೂನದಿ ಹರಿಯುತ್ತಿದೆ. ಇದರಲ್ಲಿ ದಿನವೂ ಲಕ್ಷಾಂತರಮಂದಿ ಆಸ್ತಿಕರು ಸ್ನಾನಮಾಡುತ್ತಾರೆ. ನದೀಪ್ರವಾಹದ ಹತ್ತುಮೈಲು ದೂರದಿಂದ ನಿತ್ಯವೂ ಬಂದು ನದಿಯಲ್ಲಿ ಸ್ನಾನಮಾಡುವ ಧನ್ಯರು ಹಲವರುಂಟು.

ಬ್ರಹ್ಮನು ಸೃಷ್ಟಿಕ್ರಿಯೆಯ ಮೊದಲು ವಿಷ್ಣು ಭಗವಾನನನ್ನು ಆರಾಧಿಸಿದ. ಮಗನ ಭಕ್ತಿಯಿಂದ ಆನಂದಪರವಶನಾದ ವಿಷ್ಣುವಿನ ನೇತ್ರಗಳಿಂದ ಆನಂದಾಶ್ರುಗಳುದುರಿದವು. ಬ್ರಹ್ಮನು ಆ ಬಿಂದುಗಳನ್ನು ತನ್ನ ಕಮಂಡಲದಲ್ಲಿ ಶೇಖರಿಸಿ, ಹಿಮಾಲಯಪರ್ವತದಲ್ಲಿ ಮಾನಸ ಸರೋವರವಾಗಿ ಮಾರ್ಪಡಿಸಿದ.

ಕೆಲಕಾಲದ ನಂತರ ವೈವಸ್ವತ ಮನುವಿನ ಮಗ ಇಕ್ಷ್ವಾಕು ಚಕ್ರವರ್ತಿ ಅಯೋಧ್ಯಾ ನಗರಕ್ಕೆ ಒಂದು ನದಿಯನ್ನು ಪ್ರಸಾದಿಸುವಂತೆ ಗುರು ವಶಿಷ್ಠ ಮಹರ್ಷಿಯನ್ನು ಬೇಡಿದ. ವಶಿಷ್ಠನು ತನ್ನ ತಂದೆಯಾದ ಬ್ರಹ್ಮನನ್ನು ತಪಸ್ಸಿನಿಂದ ಮೆಚ್ಚಿಸಿ ಜ್ಯೇಷ್ಠ ಶುಕ್ಲ ಪೂರ್ಣಿಮೆಯ ದಿನ ಸರಯೂನದಿಯನ್ನು ಮಾನಸಸರೋವರದಿಂದ ಅಯೋಧ್ಯೆಯತ್ತ ತಂದ. ನೇತ್ರಜಾ, ಬ್ರಹ್ಮಾನಂದದ್ರವ, ಮಾನಸನಂದಿನೀ, ವಾಶಿಷ್ಠೀ—ಎಂಬ ವಿವಿಧ ಹೆಸರುಗಳಿಂದ ಸರಯೂನದಿಯನ್ನು ಕರೆಯುತ್ತಾರೆ. ಇದರ ನೀರು ಗಂಗಾಜಲದಂತೆ ಸ್ವಚ್ಛವಾಗಿ, ಶೀತಲವಾಗಿರುತ್ತದೆ. ಅರವತ್ತು ಸಾವಿರವರ್ಷ ಗಂಗಾಸ್ನಾನ ಮಾಡುತ್ತ ಇದ್ದಲ್ಲಿ ಬರುವ ಪುಣ್ಯಫಲ ಸರಯೂ ನದಿಯ ದರ್ಶನ ಮಾತ್ರದಿಂದಲೇ ಉಂಟಾಗುವುದೆಂದು ಮಹರ್ಷಿಗಳ ಭಾವನೆ —

ಷಷ್ಟಿರ್ವರ್ಷ ಸಹಸ್ರಾಣಿ
ಗಂಗಾಸ್ನಾನಾಚ್ಚ ಯತ್ಫಲಮ್
ತತ್ಫಲಂ ಸಮವಾಪ್ನೋತಿ ।
ಸರಯೂ ದರ್ಶನೇ ಕೃತೇ ॥

ಎಂತಲೇ ಧಾರ್ಮಿಕರು ಸರಯೂ ನದಿಯನ್ನು ಧ್ಯಾನಿಸುತ್ತ,

ನಮಾಮಿ ಸರಯೂ ತವ ಪಾದಪಂಕಜಂ
ಸುರಾಸುರೈರ್ವಂದಿತ ಪಾದಪೀಠಮ್ ।
ಭಕ್ತಿಶ್ಚ ಮುಕ್ತಿಶ್ಚ ದದಾಸಿ ನಿತ್ಯಂ
ಭಾವಾನುಸಾರೇಣ ಸದಾ ನರಾಣಾಮ್ ॥

—ಎನ್ನುವರು.

ಅಯೋಧ್ಯಾ ನಗರವನ್ನು ದರ್ಶಿಸಿ ವರ್ಣಿಸಿದ ಮಹನೀಯರಲ್ಲಿ ಪ್ರಮುಖರಾದವರು ಇಬ್ಬರು. ವಾಲ್ಮೀಕಿ, ತುಲಸೀದಾಸ. ವಾಲ್ಮೀಕಿಮಹರ್ಷಿ ರಾಮಾಯಣ ಕಾಲದವನೆ, ಭಕ್ತತುಲಸೀದಾಸ 16ನೇ ಶತಕದವ. ಅವರು ವರ್ಣಿಸಿರುವ ಅಯೋಧ್ಯೆ ಇಂದಿಗೂ ನಮಗೆ ದರ್ಶನೀಯವಾಗಿರುವುದೊಂದು ವಿಶೇಷ. ಸತತವೂ ಶ್ರೀರಾಮ ನಾಮಧ್ಯಾನವೇ ಅಯೋಧ್ಯಾವಾಸಿಗಳ ಜೀವನ. ಅವರೆಲ್ಲ ಆನಂದಮಯಕೋಶದ ಧನ್ಯಜೀವಿಗಳು. ಪ್ರತಿಹೃದಯವೂ ಸೀತಾರಾಮ ಸೀತಾರಾಮ ಎಂದು ಪುಟಿಯುತ್ತದೆ. ವಾಲ್ಮೀಕಿ ವರ್ಣಿಸಿದಂತೆ

ಸ್ವಕರ್ಮ ನಿರತಾ ನಿತ್ಯಂ
ಬ್ರಹ್ಮಣಾ ವಿಜಿತೇಂದ್ರಿಯಾಃ ।
ಧ್ಯಾನಾಧ್ಯಯನ ಶೀಲಾಶ್ಚ
ಸಂಯುತಾಶ್ಚ ಪ್ರತಿಗೃಹೇ ॥

ನ ನಾಸ್ತಿಕೋ ನಾನೃತಕೋ
ನ ಕಶ್ಚಿದಬಹುಶ್ರುತಃ ।
ನಾಸೂಯಕೋ ನಾ ಚಶಕ್ತೋ
ನಾವಿದ್ವಾನ್ ವಿದ್ಯತೇ ತದಾ ॥

ತ್ರೇತಾಯುಗದ ಅಯೋಧ್ಯಾ ವಾಸಿಗಳನ್ನು ಇಂದೂ ಸಹ ನಾವು ಹಾಗಿಯೇ ದರ್ಶಿಸಬಹುದು. ತುಲಸೀದಾಸರ ಪದಗಳಲ್ಲಿ

ಸಬ ನರ ಕರಹೀ ಪರಸ್ಪರ ಪ್ರೀತಿ
ಚಲಹಿ ಸ್ವಧರ್ಮ ನಿರತ ಶ್ರುತಿನೀತಿ

ಅಯೋಧ್ಯಾನಗರ ನಿಜವಾದ ತಪೋಭೂಮಿ. ಭಗವನ್ನಿಲಯ. ಆಧುನಿಕ ಸೌಕರ್ಯಗಳಿಂದ ಕೂಡಿದ 20 ಸತ್ರಗಳೂ ಇವೆ. ಯಾವ ಮಂದಿರದಲ್ಲಿಯಾದರೂ ವಸತಿಯೇರ್ಪಡಿಸಿ ಕೊಳ್ಳಬಹುದು.

★



ಸರಯೂ ನದಿ

# ಕರ್ನಾಟಕ ಸಂಗೀತ

ವಿಶ್ವಸಂಗೀತದ ಬೆಳವಣಿಗೆಯಲ್ಲಿ ಕರ್ನಾಟಕ ವಹಿಸಿದ ಉಜ್ವಲ ಪಾತ್ರಕ್ಕೆ "ಕರ್ನಾಟಕ ಸಂಗೀತ" ಎಂಬ ಖ್ಯಾತಿಯೇ ಸಾಕ್ಷಿಯಾಗಿದೆ. ಸಂಗೀತವು ಒಂದು ಶಾಸ್ತ್ರವಾಗಿ ಅನಾದಿಯಿಂದ ಬಂದಿರುವುದು; ಭರತನ 'ನಾಟ್ಯಶಾಸ್ತ್ರ' ಮತಂಗನ 'ಬೃಹದ್ದೇಶಿ', ನಾರದನ 'ಸಂಗೀತ ಮಾರ್ಕಂಡೇಯ', ಸಾರಂಗದೇವನ 'ಸಂಗೀತ ಪಾರಿಜಾತ', ವಿದ್ಯಾರಣ್ಯರ 'ಸಂಗೀತಸಾರ', ರಾಮಾಮಾತ್ಯನ 'ಸ್ವರಮೇಳ ಕಲಾನಿಧಿ', ವೆಂಕಟಮುಖಿಯ 'ಚತುರ್ದಂಡಿ ಪ್ರಕಾಶಿಕಾ'. ತುಳಜನ 'ಸಂಗೀತ ಸಾರಾಮೃತ', ಪುಂಡರೀಕ ವಿಠ್ಠಲನ 'ರಾಗಮಾಲ', 'ಸದ್ರಾಗ ಚಂದ್ರೋದಯ' ಮುಂತಾದ ಗ್ರಂಥಗಳು ಭಾರತೀಯ ಸಂಗೀತದ ಮೇಲೆ ತಮ್ಮ ಪ್ರಭಾವವನ್ನು ಬೀರಿವೆ. ಭಾರತೀಯ ಸಂಗೀತದ ಮಹಾನ್ ಸಾಧನೆಯೆಂದರೆ 'ರಾಗಗಳ ಕಲ್ಪನೆ'. ಇಡೀ ಭಾರತೀಯ ಸಂಗೀತ ಶಿಲ್ಪದ ಬುನಾದಿ ಈ ರಾಗಗಳು. ಮಾತಿನಲ್ಲಿ ಸಾಧ್ಯವಾಗದ ಹೃದಯದ ವಿಶಿಷ್ಟ ಸೂಕ್ಷ್ಮ ಭಾವನೆಗಳನ್ನೂ, ಆಧ್ಯಾತ್ಮಿಕ ಅನುಭವದ ಸಾಧಕತೆಯನ್ನು ಹೊಮ್ಮಿಸುವ ಕಾರ್ಯ ಈ 'ರಾಗ'ದ್ದಾಯಿತು.

ದಕ್ಷಿಣದಲ್ಲಿ ಸಂಗೀತದ ಸ್ವರೂಪವನ್ನು ವ್ಯಕ್ತಪಡಿಸಿರುವ ಕ್ರಿ. ಶ. 4ನೇ ಶತಮಾನದ ಪ್ರಾಚೀನ ಗ್ರಂಥ ತಮಿಳಿನ 'ಶಿಲಪ್ಪದಿಗಾರಂ', ರಾಗಗಳು, ಸ್ವರ, ಆರೋಹ, ಅವರೋಹಗಳ ಬಗ್ಗೆ ಶಾಸ್ತ್ರೀಯವಾಗಿ ಹೇಳುತ್ತದೆ. ನಂತರದ್ದು ಮತಂಗನ 'ಬೃಹದ್ದೇಶಿ'. ಅದಾದನಂತರವೇ ಕರ್ನಾಟಕದ ಚಕ್ರವರ್ತಿ ಚಾಲುಕ್ಯ ಸೋಮೇಶ್ವರ ಭೂಲೋಕಮಲ್ಲ ( 1116-1127 ) ರಚಿಸಿದ 'ಮಾನಸೋಲ್ಲಾಸ'ದಲ್ಲಿ ಮೊದಲಬಾರಿಗೆ ದಕ್ಷಿಣ ಸಂಗೀತಕ್ಕೆ 'ಕರ್ನಾಟಕ ಸಂಗೀತ' ಎಂಬ ಪ್ರಥಮ ಉಲ್ಲೇಖವಿದೆ. ನಂತರ 1309ರಿಂದ 1312ರೊಳಗೆ ಹರಿಪಾಲನಿಂದ ರಚಿತವಾದ 'ಸಂಗೀತ ಸುಧಾಕರ'ದಲ್ಲಿ

ತದಪಿ ದ್ವಿವಿಧಂ ಜ್ಞೇಯಂ
ದಕ್ಷಿಣೋತ್ತರ ಭೇದತಃ।
ಕರ್ನಾಟಕಂ ದಕ್ಷಿಣೇ ಸ್ಯಾ
ದ್ಧಿಂದುಸ್ಥಾನೀ ತಥೋತ್ತರೇ ॥ – ಎಂದಿದೆ

ಕ್ರಿ. ಶ. ಐದನೆಯ ಶತಮಾನದ 'ಬೃಹದ್ದೇಶಿ'ಯ ಮತಂಗ ಕನ್ನಡದವನು ಮತ್ತು ಋಷ್ಯಮೂಕ ಪರ್ವತ ನಿವಾಸಿ. 'ರಾಗಸಂಗೀತ' ಒಂದು ಸ್ಪಷ್ಟ ರೂಪು ಪಡೆದದ್ದೇ ಇವನಿಂದ. ಮಾರ್ಗ ಸಂಗೀತಕ್ಕೆ ಭಿನ್ನವಾದ ದೇಶೀರಾಗಗಳ ಬಗ್ಗೆಯೇ ಮಹತ್ವಪೂರ್ಣ ಹೇಳಿಕೆಯಿರುವುದರಿಂದ ಇದು 'ಬೃಹದ್ದೇಶಿ' ಆಗಿದೆ.

ಭಾರತೀಯ ಸಂಗೀತ ಶಾಸ್ತ್ರದ ಮೇರುಪ್ರಾಯ ಶಾಸ್ತ್ರಕಾರನಾದ 'ಸಾರಂಗದೇವ'ನ (ಶಾರ್ಙ್ಗದೇವ) 'ಸಂಗೀತ ರತ್ನಾಕರ' ಸಂಗೀತ ಲೋಕದ ಅನನ್ಯ ಮಹಾ ಕೃತಿ. ಕರ್ನಾಟಕದಲ್ಲಿ ಹುಟ್ಟಿದ ಈ ವಿದ್ವಾಂಸ ಗೀತ, ವಾದ್ಯ, ನೃತ್ಯಗಳ ಸಂಪೂರ್ಣ ವಿವೇಚನೆಯನ್ನೇ ನಡೆಸಿದ್ದಾನೆ.

ಕರ್ನಾಟಕದಿಂದ ಉತ್ತರ ಭಾರತಕ್ಕೆ ಹೋಗಿ ಅಲ್ಲಿ ತಮ್ಮ ಕೀರ್ತಿಶಿಖರನ್ನು ಸ್ಥಾಯಿಗೊಳಿಸಿದವರಲ್ಲಿ ದೇವಗಿರಿಯ ಗೋಪಾಲನಾಯಕ ಪ್ರಮುಖ ವ್ಯಕ್ತಿ. ಕರ್ನಾಟಕ ಹಾಗೂ ಹಿಂದೂಸ್ಥಾನಿಗಳೆರಡರಲ್ಲೂ ಸುಪ್ರಸಿದ್ಧ ವಿದ್ವಾಂಸನಾಗಿದ್ದ ಈತ ದೇವಗಿರಿಯ ಯಾದವರ ಬಳಿಯಲ್ಲಿದ್ದ· ಉತ್ತರದ ಮಲ್ಲಿಕಾಫರ್ ದೇವಗಿರಿಯ ಮೇಲೆ ದಂಡೆತ್ತಿ ಬಂದಾಗ, ಗೋಪಾಲನಾಯಕನನ್ನು ಕಂಡು ನಾಯಕನ ವ್ಯಕ್ತಿತ್ವಕ್ಕೆ ಬೆರಗಾದ. ಆಗ ಸಾವಿರದ ಆರುನೂರು ಜನ ವಿದ್ಯಾರ್ಥಿಗಳು ನಾಯಕನ ಬಳಿ ಅನೇಕ ಶಾಸ್ತ್ರಗಳ ಅಧ್ಯಯನದಲ್ಲಿ ತೊಡಗಿದ್ದರು. ಮಲ್ಲಿಕಾಫರ್ ಗೋಪಾಲನಾಯಕನನ್ನು ಗೌರವಿಸಿ, ಪಲ್ಲಕ್ಕಿಯಲ್ಲಿ ಕುಳ್ಳಿರಿಸಿಕೊಂಡು ಉತ್ತರ ಭಾರತಕ್ಕೆ ಕರೆದೊಯ್ದ. ಅಲ್ಲಿ ಹಿಂದೂಸ್ಥಾನಿ ಪದ್ಧತಿಯ ಅತಿರಥ ಮಹಾರಥರಲ್ಲಿ ಮಹತ್ವದ ವ್ಯಕ್ತಿಯಾದ, ಗೋಪಾಲರಾಯ ದಕ್ಷಿಣದ ಹೆಮ್ಮೆ.

ವಿದ್ಯಾರಣ್ಯರ 'ಸಂಗೀತಸಾರ' ಕರ್ನಾಟಕ ಸಂಗೀತದ ಹಿರಿಮೆಯನ್ನು ಸ್ಪಷ್ಟವಾಗಿ ಎತ್ತಿ ತೋರಿಸುತ್ತದೆ. ವಿಜಯನಗರ ಸಾಮ್ರಾಜ್ಯ ಸಂಗೀತವನ್ನು ಪೋಷಿಸುವತ್ತ ಇದು ಪ್ರಥಮ ಹೆಜ್ಜೆ. ವಿಜಯನಗರದ ಇಮ್ಮಡಿ ಪ್ರೌಢದೇವರಾಯನ ಕಾಲದಲ್ಲಿ (1430) ಸಂಗೀತ ಕ್ಷೇತ್ರದಲ್ಲಿ ಹೆಸರು ಮಾಡಿದ ಕನ್ನಡದ ಕಲ್ಲಪ್ಪ ಅಥವಾ ಕಲ್ಲಿನಾಥ, 'ಸಂಗೀತ ರತ್ನಾಕರ'ದ ಅತ್ಯುತ್ತಮ ವ್ಯಾಖ್ಯಾನ ಬರೆದವನು. 'ಕಲಾನಿಧಿ' ಎಂಬ ಹೆಸರಿನ ಈ ವ್ಯಾಖ್ಯಾನ ಗ್ರಂಥದಲ್ಲಿ ಮೂಲದ ಸಂಕೀರ್ಣ ಭಾಗಗಳನ್ನೂ ಶಬ್ದಾರ್ಥ ತಾತ್ಪರ್ಯ ಧ್ವನಿ ವಿಶೇಷಗಳೊಡನೆ ವಿವರಿಸಿದ್ದಾನೆ. ಈತನ ರಾಜ 'ಪ್ರೌಢದೇವರಾಯ'ನೂ ಸಹ 'ಗಾಂಧರ್ವ ಗುಣ ಗಂಭೀರ'ನಾಗಿದ್ದು ಸಂಗೀತಕ್ಕೆ ಅನನ್ಯ ಪ್ರೋತ್ಸಾಹ ಕೊಟ್ಟ.

ವಿಜಯನಗರದ ರಾಮರಾಯನ ಆಳ್ವಿಕೆಯಲ್ಲಿದ್ದ ಇನ್ನೊಬ್ಬ ಸಂಗೀತ ಶಾಸ್ತ್ರಕಾರ 'ರಾಮಾಮಾತ್ಯ'. ಈತನು 'ಸ್ವರಮೇಳ ಕಲಾನಿಧಿ' ಎಂಬ ಶಾಸ್ತ್ರ ರಚಿಸಿ, ಹೊಸ ಅಭಿಪ್ರಾಯಗಳಿಗೊಂದು ಶಾಸ್ತ್ರೀಯ ವ್ಯವಸ್ಥೆಯೊಂದನ್ನು ನಿರೂಪಿಸಿದ. ಕೃಷ್ಣದೇವರಾಯನ 'ಸುವರ್ಣಯುಗ' ಕನ್ನಡ ಸಂಗೀತಕ್ಕೂ ಸುವರ್ಣಯುಗ. ವ್ಯಾಸ, ಪುರಂದರ ಕನಕರು ಸಂಗೀತವನ್ನು ಶಾಸ್ತ್ರೀಯ ವಿದ್ವಾಂಸರ ಉಪ್ಪರಿಗೆಗಳಿಂದ ಜನಸಾಮಾನ್ಯರಲ್ಲೂ ಜನಪ್ರಿಯ ಮಾಧ್ಯಮವಾಗುವಂತಹ ಕ್ರಾಂತಿಯನ್ನು ಮಾಡಿದರು.

16ನೇ ಶತಮಾನದ ಅಂತ್ಯದಲ್ಲಿ, ಕರ್ನಾಟಕದ ಶಿವಗಂಗೆಯ ಬಳಿಯ ಸಾತನೂರಿನ ವಿಠಲಯ್ಯ ಹಾಗೂ ದೇವಕ್ಕರ ಪುತ್ರನಾದ 'ಪುಂಡರೀಕ ವಿಠ್ಠಲ' ಕರ್ನಾಟಕ ಸಂಗೀತದಲ್ಲಿ ಪರಿಣತನಾಗಿ ಉತ್ತರ ಭಾರತದ ದಿಗ್ವಿಜಯಯಾತ್ರೆ ಕೈಕೊಂಡನು. ಅಕ್ಬರನ ಆಸ್ಥಾನದಲ್ಲಿ ತಾನ್‌ಸೇನ್, ರಾಮದಾಸ್, ಭಾನುಪಂಡಿತರ ಮಧ್ಯೆ, ಕರ್ನಾಟಕ ಸಂಗೀತ ಹಾಗೂ ನೃತ್ಯಗಳ ವಿರಾಡ್ ಪ್ರದರ್ಶನ ಮಾಡಿದ ಪುಂಡರೀಕ ವಿಠ್ಠಲ, ಹಿಂದೂಸ್ಥಾನಿಯಲ್ಲಿಯೂ ಪರಿಣತನಾಗಿ ಆಚಾರ್ಯ ಪುರುಷನಾಗಿ 'ರಾಗಮಂಜರಿ' ಎಂಬ ಸಕಲ ಲಕ್ಷಣ ಭರಿತ ಸಂಗೀತ ಕೃತಿಯೊಂದನ್ನು ರಚಿಸಿದ. ಈತ 'ರಾಗಚಂದ್ರೋದಯ' ಎಂಬ ಕೃತಿಯನ್ನೂ ರಚಿಸಿದ್ದಾನೆ. ಇದರಲ್ಲಿ ಸ್ವರಪ್ರಸಾದ, ಸ್ವರಮೇಲ ಪ್ರಸಾದ ಮತ್ತು ಗಮಕಾಲಪ್ತಿ ಎಂಬ ಮೂರು ಪ್ರಕರಣಗಳಿವೆ. ಇದು ವೈಜ್ಞಾನಿಕ ದೃಷ್ಟಿಯ ಸಂಗೀತ; ಪಂಡಿತರ ಮೇಲೆ ಅದ್ಭುತ ಪ್ರಭಾವ ಬೀರಿದೆ. ಈತ ತನ್ನ ಬಹುಮುಖ ಸಂಗೀತ ಸೇವೆ, ಸ್ವತಂತ್ರ ಮನೋಧರ್ಮ, ಶಾಸ್ತ್ರೀಯ ಹಿನ್ನೆಲೆಯ ಅಪಾರ ಪಾಂಡಿತ್ಯ ಇವುಗಳಿಂದಾಗಿ ಕರ್ನಾಟಕಸಂಗೀತದ ದ್ವಾರಾ ಭಾರತೀಯ ಸಂಗೀತ ಜಗತ್ತಿನಲ್ಲಿ ಕ್ರಾಂತಿ ತರಂಗಗಳನ್ನೆಬ್ಬಿಸಿದ ಒಂದು ಮಹಾನ್ ಸಾಧನೆಯ ವ್ಯಕ್ತಿ.

ಕರ್ನಾಟಕ ಸಂಗೀತ ಶಾಸ್ತ್ರ ಪರಂಪರೆಯ ಇನ್ನೊಂದು ಪ್ರಮುಖ ಮೈಲಿಗಲ್ಲು, ವೆಂಕಟ

ಶ್ರೀ ಆದ್ಯರಾಮಾಚಾರ್ಯ

ಮುಖಿಯ 'ಚತುರ್ದಂಡಿ ಪ್ರಕಾಶಿಕಾ' ಗ್ರಂಥ. ಗೀತ, ಆಲಾಪ, ಠಾಯ ಮತ್ತು ಪ್ರಬಂಧಗಳೆಂಬ ನಾಲ್ಕು ಆಧಾರಸ್ತಂಭಗಳ ಈ ಗ್ರಂಥ, ಹಿಂದಿನ ಸಂಗೀತಜ್ಞರ ಅನುಭವಗಳನ್ನೆಲ್ಲ ಕ್ರೋಡೀಕರಿಸಿ, ನಿರ್ಣಯಿಸಿರುವ ಎಪ್ಪತ್ತೆರಡು ಮೇಳಕರ್ತಗಳ ಯೋಜನೆ ಹಾಗೂ ಜನ್ಯಜನಕ ರಾಗಗಳ ಸ್ವರೂಪದಿಂದಾಗಿ, ಇಂದಿಗೂ ಅಜರಾಮರವಾಗಿ ಉಳಿದಿದೆ. ಈತ ತೀರ್ಥಹಳ್ಳಿಯ ಬಳಿ ಒಂದು ಊರಿನವನು.

ಸಂಗೀತ, ಕನ್ನಡಿಗರ ಸುಖದುಃಖಗಳಲ್ಲಿ, ಹಬ್ಬ ಹರಿದಿನಗಳಲ್ಲಿ, ಮದುವೆ ಮುಂಜಿಗಳಲ್ಲಿ, ಪೂಜೆ ವೈಭವಗಳಲ್ಲಿ, ಬದುಕಿನ ದಿನನಿತ್ಯದ ಒಡನಾಡಿಯಾಗಿ ಬೆಳೆದು ಬಂತು.

ಜನಪದ ಸಂಗೀತ ಬಂಡಿಹೊಡೆಯುವಾಗ, ದೋಣಿಯಾಟದಲ್ಲಿ, ಸುಗ್ಗಿಯ ಕುಣಿತದಲ್ಲಿ, ಡೊಳ್ಳಿನ ಪದದಲ್ಲಿ, ಕೋಲಾಟದಲ್ಲಿ, ಉಸಿರಿನ ಏರಿಳಿತಗಳನ್ನೇ ನಾದಲಯಗಳನ್ನಾಗಿ ಮಾಡಿಕೊಂಡು, ಶ್ರಮವನ್ನೇ ಶ್ರುತಿಯನ್ನಾಗಿಸಿ, ದುಡಿಯುವ ಜನರ, ಹೃದಯದ ಭಾವನೆಗಳ ಪ್ರಾಮಾಣಿಕ ಅಭಿವ್ಯಕ್ತಿಯಾಗಿರುವ ಮಹಾನ್ ಸಂಗೀತವಾಗಿದೆ.

ಚಾಲುಕ್ಯ, ಹೊಯ್ಸಳ, ರಾಷ್ಟ್ರಕೂಟ, ವಿಜಯನಗರ ಕಾಲದ ಶಾಸನಗಳಲ್ಲಿ ಸಂಗೀತ ಕುರಿತಾದ ಅನೇಕ ಹೇಳಿಕೆಗಳೂ, ವಿವರಗಳು ವಿಪುಲವಾಗಿ ದೊರೆಯುತ್ತವೆ. ಸಾಹಿತ್ಯದಲ್ಲೂ ಸಂಗೀತದ ವರ್ಣನೆ ಮುಂಚಿನಿಂದಲೂ ಇದೆ. ಪಂಪನ ನೀಲಾಂಜನೆಯ ನೃತ್ಯದ ವರ್ಣನೆ ಹಾಗೂ ಸಂಗೀತ ಸೂಚಕ ವಾಕ್ಯಗಳು ಮತ್ತು ರನ್ನ, ಜನ್ನ, ರತ್ನಾಕರರ ಸಂಗೀತ ಕಲೆಯ ವರ್ಣನೆಗಳು ಇಲ್ಲಿ ಉಲ್ಲೇಖನೀಯ. ವಿಜಯನಗರ ಕಾಲದಲ್ಲಂತೂ ಸಂಗೀತ ನೃತ್ಯದ ವಿವರಗಳು ಹೇರಳವಾಗಿ ಸಿಗುತ್ತವೆ. ಹೊಯ್ಸಳ, ವಿಷ್ಣುವರ್ಧನನ ಪಟ್ಟ ಮಹಿಷಿ ಶಾಂತಲಾದೇವಿ 'ಸಂಗೀತ ನೃತ್ಯ ಸರಸ್ವತಿ' ಎಂಬ ಬಿರುದು ಪಡೆದಿರುವುದೇ ಆ ಕಾಲದ ಸಂಗೀತ ಪ್ರಜ್ಞೆಗೆ ಒಂದು ಮಹಾನ್ ನಿದರ್ಶನ. ಇಮ್ಮಡಿ ಪ್ರೌಢದೇವರಾಯನ ಆಸ್ಥಾನದ ಚಂದ್ರಶೇಖರ ಕವಿಯ 'ಪಂಪಾಸ್ಥಾನ ವರ್ಣನೆ' ಆ ಕಾಲದ ಸಂಗೀತ ನೃತ್ಯದ ಸಂಪೂರ್ಣ ಪರಿಚಯ ಮಾಡಿಕೊಡುವ ಒಂದು ತಾಂತ್ರಿಕ ರಸವರ್ಣನಾತ್ಮಕ ಗ್ರಂಥ.

ಸಂಗೀತವನ್ನು ಜನಜೀವನದಲ್ಲಿ ಸದಾ ಮೇಳವಿಸಲು, ಭಕ್ತಿಯ ಬೀಜವನ್ನು ಬಿತ್ತಿ ಬೆಳೆಯಲು ಪೂರಕವಾಗಿ ಉಪಯೋಗಿಸಿಕೊಂಡವರಲ್ಲಿ 12ನೇ ಶತಮಾನದ ಬಸವಾದಿ ಶಿವಶರಣರು ಪ್ರಮುಖರು. ಬಸವಣ್ಣ, ಅಕ್ಕಮಹಾದೇವಿ, ಅಲ್ಲಮಪ್ರಭು ಮೊದಲಾದವರು ವಚನಗಳಂತೆಯೇ ಪಲ್ಲವಿ ಸಹಿತ ವಿಚಾರಪೂರ್ಣ ಹಾಡುಗಳನ್ನೂ ರಚಿಸಿದ್ದಾರೆ.

ನಂತರದಲ್ಲಿ ನಿ ಜ ಗು ಣ ಶಿವಯೋಗಿಗಳು ಸಂಗೀತ ಜಗತ್ತಿನ ಅದ್ಭುತ ಸಾಧಕರಾದರು. ವಚನ ಸಾಹಿತ್ಯಕ್ಕೂ, ದಾಸ ಸಾಹಿತ್ಯಕ್ಕೂ ನಡುವಣ ಸೇತುಬಂಧವಾದರು. ನಿಜಗುಣರ ಕೈವಲ್ಯ ಪದ್ಧತಿ ಆಧ್ಯಾತ್ಮ ಸಿದ್ಧಿಯೊಡನೆ ಮಿಳಿತವಾದ ಉಜ್ವಲ ಸಗೀತ ಪ್ರಭೆಯನ್ನು ಬೆಳಗುವ ಮಹಾನ್ ಪದ್ಧತಿ. ಸಾಹಿತ್ಯ ಮತ್ತು ಸಂಗೀತ

(31ನೇ ಪುಟ ನೋಡಿ)

# ಕುಮಾರವ್ಯಾಸ ಕವಿಕಾವ್ಯ ದರ್ಶನ

ಸುಮಾರು ಎರಡು ಸಾವಿರದೈನೂರು ವರ್ಷಗಳ ಐತಿಹ್ಯವಿರುವ ಕನ್ನಡ ಸಾಹಿತ್ಯವು ಅನೇಕ ಕವಿ ಹಾಗೂ ಕೃತಿಗಳಿಂದ ವೈವಿಧ್ಯಮಯವೂ ಆಗಿದೆ. ಕನ್ನಡ ಸಾಹಿತ್ಯದ ಕೆಲವು ಘಟ್ಟಗಳಲ್ಲಿ ಕುಮಾರ ವ್ಯಾಸಯುಗ ವೈಶಿಷ್ಟ್ಯ ಪೂರ್ಣವಾದ ಘಟ್ಟ. ಈ ಯುಗಕ್ಕೆ ಮೊದಲಿಗನಾದ ಕುಮಾರ ವ್ಯಾಸನು ಕನ್ನಡ ಕವಿಗಳಲ್ಲಿ ಒಬ್ಬ ತಲೆಮಣಿ; ಯುಗವನ್ನೇ ತನ್ನ ಹೆಸರಿನಿಂದ ಕರೆಸಿಕೊಳ್ಳುವ ಕಲಾಪ್ರೌಢಿಮೆಯುಳ್ಳ ದಿನಮಣಿ.

ಕಣ್ಮರೆಯಾದರೂ ಆತನ ಚರಿತ್ರೆ, ಕಣ್ಮುಂದೆ ಉಂಟು. ಆತನ ಕೃತಿ ಹತ್ತು ಪರ್ವಗಳಲ್ಲಿ ಹರಡಿದೆ. ಈ ಕೃತಿ ದಶದಿಕ್ಕುಗಳಲ್ಲಿ ಪಸರಿಸಿದೆ. ವಿಶ್ವದಂತೆ ವಿಶಾಲವಾದ ಈ ಹೊತ್ತಿಗೆ ವೈಷ್ಣವ ಭಕ್ತಿ ರೂಪ ದಲ್ಲಿ ಪ್ರಾರಂಭವಾದ ಆ ರಸಸ್ಫೂರ್ತಿ ಕುಮಾರ ವ್ಯಾಸನೆಂಬ ಬಿರುದಿನ ನಾರಾಯಣಪ್ಪನ ಮಹಾ ಕೃತಿಯಲ್ಲಿ ತನ್ನ ವಿಜಯಚುಂಬಿಯಾದ ಬೃಹತ್ ಗೋಪುರವನ್ನು ಕಂಡರಿಸಿಕೊಂಡಿದೆ. ಕನ್ನಡ ಕಾವ್ಯವೃಷ್ಟಿಯ ಕಾಮನಬಿಲ್ಲಿನಲ್ಲಿ ಈತನ ನೆಲೆ ನಟ್ಟನಡು, ನೆತ್ತಿಯ ಹುಡಿ, ಹಳೆಯ ಹೊಸ ಗನ್ನಡದ ತಲೆಯ ಕಿರೀಟ, ಕನ್ನಡದ ಹೊಸ ಹುಟ್ಟಿನಲ್ಲಿ ಹೊಸ ಮಾರ್ಗಕ್ಕೆ ಹೊಸ ಶಕ್ತಿಗೆ ದಿಕ್ಸೂಚಿ, ಧ್ರುವತಾರೆ.

ವೇದ ವ್ಯಾಸರ ಪ್ರೇಮದ ಕುಮಾರನೆಂದರೂ ಸರಿ, ವೀರ ನಾರಾಯಣನ ಪ್ರೇಮ ಕಿಂಕರ ನಮ್ಮ ನೆಚ್ಚಿನ ನಾರಾಯಣಪ್ಪನೆಂದರೂ ಸರಿ. ಮಹತ್ತಿ ನೊಡನೆ ಜನಪ್ರಿಯತೆಯನ್ನು ಪಡೆದಿರುವ ವಿರಳ, ಸುಯೋಗಿ ಕವಿಗಳಲ್ಲಿ ಈತನು ಅಗ್ರಗಣ್ಯನು. ಕಲಿಯದವರಿಗೂ ಕಾಮಧೇನುವಾಗಿ ಕನ್ನಡ ನಾಡಿನ ಜನ ಜೀವನದ ಹೃದಯ ವೇದಿಕೆಯಲ್ಲಿ ಅಗ್ರಸ್ಥಾನವನ್ನಲಂಕರಿಸಿದ ಮಹಾಧ್ಯಕ್ಷ ನಾಗಿದ್ದಾನೆ. ಕವಿ ಕುಮಾರವ್ಯಾಸನು ಗದುಗಿನ ವೀರನಾರಾಯಣನ ಪರಮ, ನಿಸ್ಸೀಮ ಭಕ್ತ ನಾಗಿದ್ದಾನೆ.

ನಾಡಿನ ಜನ ಶತಮಾನಗಳಿಂದ ಹಾಡಿ ಹರ ಸುತ್ತಿರುವ ಈ ಕವಿಯ ಕಾಲದ ಬಗ್ಗೆ ಪಂಡಿತ ರಲ್ಲಿ ಭಿನ್ನಾಭಿಪ್ರಾಯವಿದೆ. ಸು. 13–15 ಶತ ಮಾನದವರೆಗೂ ಆತನ ಕಾಲ ತುಳುಕಾಡುತ್ತದೆ. ಮಹಿಮಾತೀತನಾದುದರಿಂದಲೋ ಏನೋ ಈ ಎಲ್ಲ ಶತಮಾನಗಳಲ್ಲಿ ಆತನ ಇರುವಿಕೆಯ ಬಗ್ಗೆ ದಂತ ಕಥೆಗಳು ಹುಟ್ಟಿಕೊಂಡಿವೆ. ಕವಿ ಚರಿತೆ ಕಾರರ ಪ್ರಕಾರ ಈತನ ಕಾಲ 1430 ಎಂದು ಹೇಳಬಹುದು. ವಿಜಯನಗರದ ಕೃಷ್ಣದೇವ ರಾಯನ ಕಾಲದಲ್ಲಿ ಬಾಳಿದನೆಂದು ಕೆಲವರ ವಾದ ವಿದೆ. ವರಕವಿ ಕುಮಾರ ವ್ಯಾಸನ ಕಾಲ 1430 ಎಂದೇ ನಾವು ತಿಳಿಯಬಹುದು.

“ಕೃತಿಯು ಸಕ್ಕನರ್ಣಾಟಕ ಭಾರತಕ್ಕೆ ಮಂಜುಳ ಮಂಜರಿಯು, ಮಹಾಕೃತಿಗೆ ನಾಯಕನಾದ ಗದುಗಿನ ವೀರನಾರಾಯಣ” ಎಂದು ಪೀಠಿಕಾ ಭಾಗದಲ್ಲಿ ಎಚ್ಚರಿಸಿದ ಕವಿ “ತಿಳಿಯ ಹೇಳುವೆ ಕೃಷ್ಣ ಕಥೆಯನು” ಎಂದವನು ಕೃಷ್ಣ ಭಕ್ತಿಯನ್ನು ಕೊಂಡಾಡುತ್ತ ಕುಣಿದ, ಮಹಾಭಾರತದ ವೀರ, ರೌದ್ರ ರಸಾದಿಗಳನ್ನು ಚಿತ್ರಿಸಲು ಸಮರ್ಥನಾದ ಕವಿ ತನ್ನ ಕಾಲ, ಕುಲ, ಗೋತ್ರ ಬಿರುದಾಂಕಿತ ಗಳನ್ನು ಹೇಳಿಕೊಂಡಿಲ್ಲ. ಅವನು ದೊಡ್ಡ ಕವಿ, ಮಹತ್ವದಿಂದಲ್ಲ, ಕವಿತ್ವದಿಂದಾಗಿ. ದೇಶೀ ನಿಷ್ಠೆಗೆ ಮಹಾಕವಿಯೆನಿಸಿ, ತನ್ನ ಭಾರತದಲ್ಲಿ ದೃಷ್ಟಾಂತ ವನ್ನು ಅದ್ಭುತವಾಗಿ ಹುದುಗಿಸಿದ ಈ ದಿವ್ಯ ಕವಿ ನಮ್ಮವನು, ಕನ್ನಡಿಗ, ಕನ್ನಡಿಗರನ್ನು ಒಂದಾಗಿ ಬೆಸೆಯುವವನು. ಹೀಗೆ ಕುಮಾರ ವ್ಯಾಸನು ಕನ್ನಡಿಗರಿಗೆ ಹೆಮ್ಮೆಯ ಕವಿಯಾಗಿ ದ್ದಾನೆ. ಕುಮಾರ ವ್ಯಾಸನ ಭಾರತವು ಕಲಿಯ ದವರಿಗೂ ಕಾಮಧೇನು ಎನ್ನುವ ಮಾತು ನೂರಕ್ಕೂ ನಿಜ. ಇನ್ನು ಕಲಿತವರಿಗೆ ಹೇಳ ಬೇಕೆ? ಕಾವ್ಯಕ್ಕೇ ಗುರು. ಅವನ ಕಾವ್ಯ ವನ್ನು ಓದಿ ತೃಪ್ತಿಪಡದ ಸಹೃದಯನಿಲ್ಲ.

ಸುಂದರವಾದ ಬಂಧ ದೃಷ್ಟಿ, ದರ್ಶನದಲ್ಲಿ ಭಾಗವತ ದೃಷ್ಟಿಗಳ ಸಮನ್ವಯ ಕಾವ್ಯವೆನಿಸಿದ ಕುಮಾರವ್ಯಾಸ ಭಾರತವನ್ನವಲೋಕಿಸಿದಾಗ ಕುವೆಂಪು ಅವರ ಉದ್ಗಾರ:

ಕುಮಾರ ವ್ಯಾಸನು ಹಾಡಿದನೆಂದರೆ
ಕಲಿಯುಗ ದ್ವಾಪರವಾಗುವುದು
ಭಾರತ ಕಣ್ಣಲ್ಲಿ ಕುಣಿವುದು ಮೈಯಲಿ
ಮಿಂಚಿನ ಹೊಳೆ ತುಳುಕಾಡುವುದು

ಹೀಗೆ ಕುಮಾರವ್ಯಾಸನ ಕವಿತ್ವದ ಹಿರಿತನವನ್ನು ಗುರುತಿಸಿದ್ದಾರೆ ಅವರು.

“ಕವಿದು ಬರೆ ಕವಿ ಕುಮಾರವ್ಯಾಸನ ಆವೇಶ ವಾಣಿ ವಿಕಂಪಿಸಿದುದು ಸಹ್ಯಾದ್ರಿಯ ಗಿರಿವನ ಶ್ರೇಣಿ” ಎನ್ನುವ ಮಾತು ಕವಿಯ ಕೃತಿಗಿದಿರುವ ರನ್ನಗನ್ನಡಿ.

ಕುಮಾರವ್ಯಾಸನ ಕೃತಿಗಳು ಎರಡು. ಒಂದು ‘ಐರಾವತ’, ಇನ್ನೊಂದು ‘ಕರ್ನಾಟಕ ಕಥಾ ಮಂಜರಿ’ ಅಥವಾ ದಶಪರ್ವ ಭಾರತ, ಗದುಗಿನ ಭಾರತ, ಕನ್ನಡ ಭಾರತ ಎಂಬ ಹಲವು ನಾಮ ಗಳಿಂದ ಕರ್ನಾಟಕದಲ್ಲಿ ಪ್ರಸಿದ್ಧಿ ಪಡೆದ ಕುಮಾರ ವ್ಯಾಸ ಭಾರತ.

ವೇದವ್ಯಾಸರ ಪ್ರೀತಿಯ ಪುತ್ರನೆಂದು ಹೇಳಿ ಕೊಂಡ ಕುಮಾರವ್ಯಾಸನು ಮಹಾಭಾರತವನ್ನೇ ತನ್ನ ಪ್ರತಿಭೆ ಪ್ರದರ್ಶನಕ್ಕೆ ಮಾಧ್ಯಮವಾಗಿ ಆರಿಸಿಕೊಂಡಿರಲು ಔಚಿತ್ಯ ಪೂರ್ಣವಾದ ಕಾರಣ ಇರಲಿಕ್ಕೆ ಸಾಕು.

“ತಿಣುಕಿದನು ಫಣಿರಾಯ ರಾಮಾಯಣ ಕವಿ ಗಳ ಭಾರದಲಿ” ಎಂದು ಕವಿಯೇ ಹೇಳಿದಂತೆ ಆ ಕಥೆಯಲ್ಲಿ ‘ಕಾಲಿಡಲು ತೆರಪಿಲ್ಲ’ದಂತಾಗಿದೆ, ಚತುರ್ವೇದಗಳೊಳಗೆ, ಮಹಾಭಾರತವೊಂದು ಪಂಚಮವೇದವೆಂದು ಕವಿ ಹೇಳುತ್ತಾನೆ. ಕಥೆಯ ಹರವು ವಿಶಾಲವಾದುದರಿಂದ, ತನ್ನ ಪ್ರತಿ ಮಾತೂ ಜನಮನ ಮಿಡಿಯಲು ಅವಕಾಶ ವೀಯುತ್ತದೆಂಬ ಕಾರಣದಿಂದ ಕುಮಾರವ್ಯಾಸನು ಭಾರತವನ್ನೇ ತನ್ನ ಮಾಧ್ಯಮವಾಗಿ ಬಳ ಸಿರುವುವರಲ್ಲಿ ಔಚಿತ್ಯ ಉಂಟೆಂದು ತರ್ಕಿಸ ಬಹುದು.

ಕರ್ನಾಟಕ ಭಾರತ ಕಥಾಮಂಜರಿ ದಶಪರ್ವ ಗಳಿಂದ ಕೂಡಿದ್ದು, ಆದಿಪರ್ವದಿಂದ ಗದಾಪರ್ವದ ವರೆಗೆ ಈ ಕಾವ್ಯದ ಹರವು ಇದೆ. ಕೇವಲ ಹತ್ತು ಪರ್ವಗಳಲ್ಲಿ ಮಹಾಭಾರತದ ಕಥೆಯನ್ನು ಕವಿಯು ಸೆರೆ ಹಿಡಿದಿದ್ದರೂ ಇದೊಂದು ಅಪೂರ್ಣವಾದ

ಕು॥ ರಾಧಾ ಜೋಷಿ

ಕೃತಿಯಲ್ಲ, ಇದು ಪರಿಪೂರ್ಣವಾದ ಕೃತಿಯಾಗಿದೆ. ಕುಮಾರವ್ಯಾಸನ ಭಾರತದ ಕುರುಕ್ಷೇತ್ರದಲ್ಲಿ ನಡೆಯುವ ಆ ವಿದ್ಯುತ್ ಘರ್ಷಣೆಯನ್ನು ಕಂಡಾಗ, ಕೇಳದು ಉಂಡಾಗ, ಅವನ ವಿದ್ಯುತ್ಪ್ರವಾಹದಲ್ಲಿ ಮಿಂದು, ಮುಳುಗಿ ಮೇಲೆದ್ದು ಈಚೆ ಬಂದಾಗ ಈ ಮಾತು ಸತ್ಯವೆಂದು ಅನಿಸುತ್ತವೆ. ಇದು ಅರಸುಗಳಿಗೆ ವೀರ, ದ್ವಿಜರಿಗೆ ಪರಮ ವೇದದ ಸಾರ, ಯೋಗೀಶ್ವರರ ತತ್ತ್ವ ವಿಚಾರ, ಮಂತ್ರೀ ಜನಕ್ಕೆ ಬುದ್ಧಿ ಗುಣ, ವಿರಹಿಗಳ ಶೃಂಗಾರ, ವಿದ್ಯಾಪರಿಣಿತರ ಅಲಂಕಾರ. ಕಾವ್ಯಕ್ಕೆ ಗುರುವೆನಲು ರಚಿಸಿದ ಕುಮಾರವ್ಯಾಸ ಭಾರತವ' ಎಂದ ಕವಿ. ತನ್ನನು ಕೇವಲ ಲಿಪಿಕಾರನೆಂದು ಪರಿಣಿಸಿ ಕೊಂಡಾಗ ಮಾತ್ರ ಮಹಾಕಾವ್ಯ ಮೂಡಿ ಬರುತ್ತದೆ, ಎನ್ನುವುದಕ್ಕೆ ಕುಮಾರವ್ಯಾಸನೇ ಜೀವಂತ ನಿದರ್ಶನ.

ಕುಮಾರವ್ಯಾಸ ಭಾರತ ಮೂಲ ಭಾರತದ ಕೃತಿಕೃತಿಯಲ್ಲ, ಸರಳಾನುವಾದವಲ್ಲ, ಸ್ವತಂತ್ರ ಕಳೆಯುಳ್ಳ ಪ್ರತಿ ನಿರ್ಮಾಣ. ಇದು ಪಂಪನ ಕೃತಿಕೃತಿಯಲ್ಲ; ಮಹರ್ಷಿ ವ್ಯಾಸರ ಕಾವ್ಯವನ್ನು ಕನ್ನಡದಲ್ಲಿ ಪಂಪನಂತಹ ಮಹಾಕವಿ ರಚಿಸಿದ ಮೇಲೆ, ಮತ್ತೊಬ್ಬ ಕವಿ ಈ ಕಾವ್ಯವನ್ನು ಹೆಚ್ಚು ಸಮರ್ಪಕವಾಗಿ, ನವ್ಯವಾಗಿ ಮಾಡುತ್ತೇನೆಂದು ಹೊರಟಿರುವುದು ಕುಮಾರವ್ಯಾಸನ ಸಾಹಸವೇ ಸರಿ. ಈತನು ವ್ಯಾಸ ಭಾರತದಿಂದ ಕಾವ್ಯದ ನೆಲೆಗಟ್ಟನ್ನು ಭದ್ರಪಡಿಸಿ, ಪಂಪ ಭಾರತದ ಸಾರವನ್ನು ಹೀರಿಕೊಂಡು, ಕನ್ನಡದೇಶಿಯ ಸಹಜ ಸಂಪತ್ತಿಯ ಹೊಸ ಸೃಷ್ಟಿಯನ್ನು ಎರಕಹೊಯ್ದು ತನ್ನ ಸ್ವಂತಿಕೆಯ ಮುದ್ರೆಯನ್ನೊತ್ತಿದ್ದಾನೆ. ತಾನೆತ್ತಿದ ಮಣ್ಣನ್ನು ಹೊನ್ನಾಗಿ ಮಾಡಿ, ಹೊನ್ನನ್ನು ಹೊಳೆಹೊಳೆವ ರನ್ನವನ್ನಾಗಿ ಮಾಡಿದ ಕುಮಾರವ್ಯಾಸನು ವಿಶಿಷ್ಟಶಕ್ತಿಯ ಸ್ವತಂತ್ರ ಕವಿ ಪ್ರಾರಂಭದಲ್ಲಿ ಹೆಚ್ಚು ಕಡಿಮೆ ವ್ಯಾಸರನ್ನೇ ಹಿಂಬಾಲಿಸಿದ ಇವನು ಯುದ್ಧ ಪರ್ವಗಳು ಬಂದಾಗ ತನ್ನ ದಾರಿಯನ್ನು ತಾನು ಕಂಡು ಕೊಂಡಿದ್ದಾನೆ, ಭಾಮಿನೀ ಷಟ್ಪದಿಯ ಹಾದಿಯಲ್ಲಿ. ಕಥೆಯ ದೃಷ್ಟಿಯಲ್ಲಿ ಪಂಪನಿಗೂ ಈತನಿಗೂ ಬಹಳ ವ್ಯತ್ಯಾಸವಿರುವುದರಿಂದ ಈ ರೀತಿಯ ನವ್ಯತೆಯಿಂದಲೂ ಕುಮಾರವ್ಯಾಸನ ಭಾರತ ಕನ್ನಡದಲ್ಲಿ ವೈಶಿಷ್ಟ್ಯಪೂರ್ಣವಾದ ಸ್ವತಂತ್ರ ಕೃತಿಯಾಗಿದೆ. ಪಂಪನಿಗೆ ಭಾರತವು ಲೌಕಿಕವಾದರೆ, ಕುಮಾರವ್ಯಾಸನಿಗೆ ಭಗವದ್ವಿಲಾಸದ ಭೂಮಿಕೆಯಾಯಿತು. ಸಾಮಾನ್ಯವಾಗಿ ಈತನನ್ನು ಭಾಮಿನಿಯ ಷಟ್ಪದಿಕಾರ ಎಂದು ಕರೆಯುವುದುಂಟು. ಆದರ ಇದೇ ಅವನ ರೀತಿಯಲ್ಲ. ಆತನದು ಮಹಾ ಪ್ರಾಜ್ಞನ ರೀತಿ. ಮಹಾಕವಿಯ ರೀತಿ. ಆದರಿಂದ ಮಾನವ ಸ್ವಭಾವದ ಅತಿ ಸಹಜ ಸ್ವರೂಪದ ಅನುಭವ ಪದ್ಯವಾಗುತ್ತದೆ. ಕಾವ್ಯ ಪ್ರಾರಂಭದಲ್ಲಿಯೇ ಕವಿ "ವೀರನಾರಾಯಣನೇ ಕವಿ, ಲಿಪಿಕಾರ ಕುಮಾರವ್ಯಾಸ" ಎಂದಿರುವನು. ಈ ಮಾತನ್ನು ಗಮನಿಸಿದಾಗ ಕುಮಾರವ್ಯಾಸನ ಭಗವದ್ಭಕ್ತಿ ಹಾಗೂ ದೈವಿಕ ಶ್ರದ್ಧೆಗಳ ಸ್ಪಷ್ಟ ಕಲ್ಪನೆಯಾಗುತ್ತದೆ. ಇವನ ಕಾವ್ಯಕ್ಕೆ ಶ್ರೀ ಕೃಷ್ಣನೇ ಕಥಾನಾಯಕ.

ತಿಳಿಯ ಹೇಳುವೆ ಕೃಷ್ಣ ಕಥೆಯನು
ಇಳೆಯ ಜಾಣರು ಮೆಚ್ಚುವಂದದಿ

ಈ ಮಾತನ್ನು ಹೇಳಿದಾಗ ಅವನಲ್ಲಿ ಇರುವ ಶ್ರೀಕೃಷ್ಣ ಭಕ್ತಿಯ ಜೊತೆಯಲ್ಲಿ ಶ್ರೀ ಕೃಷ್ಣನೇ ಕಾವ್ಯಕ್ಕೆ ಪ್ರೇರಕನು, ಚಾಲಕನು ಎನ್ನುವುದು ವಿದಿತವಾಗುವುದು. ಶ್ರೀಕೃಷ್ಣನ ಪಾತ್ರವು ಕುಮಾರವ್ಯಾಸನ ಭಾರತದಲ್ಲಿ ಅತ್ಯಂತ ಪ್ರಧಾನವೂ, ವಿಶಿಷ್ಟವೂ, ಸರ್ವ ಪ್ರೇರಕವೂ, ಬೋಧಕವೂ ಆದುದು. ಅವನು ಮಹಾಭಾರತದ ಸೂತ್ರಧಾರ. ತನ್ನ ಭಕ್ತರಿಗಾಗಿ ಶ್ರೀಕೃಷ್ಣ ಕರಗುತ್ತಿದ್ದನಂತೆ. ಭಕ್ತರ ಉದ್ಧಾರದ ಸಂದರ್ಭದಲ್ಲಿ ನುಡಿದ ಮಕ್ಕಳನ್ನು ಗಮನಿಸುತ್ತಿರಲಿಲ್ಲವಂತೆ.

"ಒಲಿದವರನುಜ್ಜೀವಿಸುವ ಬಗೆ ಬಲುಹು ಮುರಮಥನಂಗೆ" ಎಂಬ ಶ್ರೀ ಕೃಷ್ಣನನ್ನು ಅರಿತು ನಾವು ಮಹಾಕರುಣೆಯ ವಿಶ್ವಾಲಿಂಗನದಲ್ಲಿ ಮೈಮರೆಯುತ್ತೇವೆ. ಭಾರತದಲ್ಲೆಲ್ಲ ಅಗ್ನಿಕನ್ಯೆಯಾಗಿ, ಪ್ರಾಜ್ವಲ್ಯಮಾನವಾಗಿ ಥಳಥಳಿಸುವವಳು ದ್ರೌಪದಿ–"ಹಿರಿಯರಿಲ್ಲದ ಸಭೆ, ಮನುಷ್ಯರ ನೆರವಿಗೆ ಸಭೆಯಲ್ಲ, ಮೂರ್ಖರು ಹಿರಿಯರಲ್ಲ, ಯಥಾರ್ಥ ಭಾಷಣ ಭೀತ ಚೇತನರು" ಎಂದು ಟೀಕೆಯ ಮನೋಭೂಮಿಕೆಯಲ್ಲಿರುವ ದ್ರೌಪದೀ:

ಹೊಲಬು ತಪ್ಪಿದ ಹುಲ್ಲೆ ಬೇಡನ
ಬಲೆಗೆ ಬಿದ್ದಂತಾದನೈ ಬಲು
ಹಳುವದಲಿ ತಾಯಿ ಬಿಸುಟ ಶಿಶುವಿನಂತಾದೆನೈ ಹರಿಯೆ
ಕೊಲುವವೈ ಕಾಗೆಗಳಕಟ ಕೋ
ಗಿಲೆಯ ಮರಿಯನು ಕೃಷ್ಣಾ ಕರುಣಾ
ಜಲಧಿ ಕೈ ಗಾಯಬೇಕು

ಎಂದು ಅಳ್ಪರಿದ ಅವಳ ಮಾತಿನಲ್ಲಿ ಜಗತ್ತಿನ ಅಬಲೆಯರ ನಿಸ್ಸಹಾಯಕತೆ, ದುಃಖವನ್ನು ಕವಿ ಹೃದಯ ಸ್ಪಂದನವಾಗುವಂತೆ ಚಿತ್ರಿಸಿದ್ದಾನೆ. ಅವಳು ಸತ್ಕುಲ ಪ್ರಸೂತೆಯೂ, ಮಹಾ ಪತಿವ್ರತೆಯೂ ಆಗಿದ್ದಳು. ಧರ್ಮರಾಜನು ಭಾರತದ ನಾಯಕನಾಗಿದ್ದರೂ ಶ್ರೀಕೃಷ್ಣನ ಅತಿಮಾನುಷ ಶಕ್ತಿಯಲ್ಲಿ ತನ್ನ ಸಾಯಕತ್ವವನ್ನು ನಿವೇದಿಸಿಕೊಂಡಿರುವಂತೆ ಕಾಣುತ್ತಾನೆ. ಅವನು

(29 ನೇ ಪುಟ ನೋಡಿ)

# ಶ್ರೀ ಪರಾಶರಭಟ್ಟರ ಅಷ್ಟಶ್ಲೋಕೀ

( ಮುಂದುವರಿದದ್ದು )

## ಭಾಗ - ೨

ಭಗವಲ್ಲಾಭಕ್ಕಾಗಿ, ಪ್ರಪತ್ತಿನಿಷ್ಠನಾದ ಮುಮುಕ್ಷುವಿಗೆ ವಿಘ್ನಗಳು ನಿವೃತ್ತಿಯಾಗಿ, ಶೀಘ್ರದಲ್ಲಿ ಸಿದ್ಧಿಯುಂಟಾಗುವುದಕ್ಕೆ ಮಂತ್ರಜಪಗಳು ಅವಶ್ಯಕವೆಂಬ ವಿಷಯವನ್ನು ಪೂರ್ವಾಚಾರ್ಯರುಗಳು, ಮಹರ್ಷಿಗಳು ಮತ್ತು ಭಾಗವತೋತ್ತಮರು ಏಕಮನಸ್ಕರಾಗಿ ಅಂಗೀಕರಿಸಿರುವರು. ಶ್ರೀವೈಷ್ಣವರಿಗೆ 'ರಹಸ್ಯತ್ರಯ' ಎಂದರೆ ಮೂಲ ಮಂತ್ರ, ದ್ವಯಮಂತ್ರ, ಮತ್ತು ಚರಮ ಶ್ಲೋಕಗಳೆಂಬ ಮೂರು ಮಂತ್ರಗಳೂ ನಿತ್ಯಾನುಷ್ಠಾನ ಜಪಗಳಾಗಿ ಪೂರ್ವಾಚಾರ್ಯರುಗಳಿಂದ ನಿಷ್ಕರ್ಷಿಸಲ್ಪಟ್ಟಿವೆ.

ಶ್ರೀ ಪರಾಶರಭಟ್ಟರು ಮೂಲಮಂತ್ರದ ವಿವರಣೆಯನ್ನು ಮೊದಲು ನಾಲ್ಕು ಶ್ಲೋಕಗಳಲ್ಲಿ ಸಂಸ್ಕೃತ ಭಾಷೆಯಲ್ಲಿ ನಿರೂಪಿಸುವುದನ್ನು ಹಿಂದೆ ವಿವರಿಸಲಾಗಿದೆ. ಈಗ ಕಡೆಯ ನಾಲ್ಕು ಶ್ಲೋಕಗಳಲ್ಲಿ ದ್ವಯಮಂತ್ರ ಮತ್ತು ಚರಮಶ್ಲೋಕಗಳನ್ನು ವಿವರಿಸಿರುವುದನ್ನು ಕಾಣಬಹುದು.

ಅಷ್ಟಶ್ಲೋಕಿಯ ಐದು ಮತ್ತು ಆರನೇ ಶ್ಲೋಕಗಳು ಈಶ್ವರತ್ವವಿವರಣೆಯನ್ನು ಮುಂದುವರಿಸುತ್ತವೆ. ಅನುಷ್ಠಾನರೂಪದಲ್ಲಿ ಚೇತನನ ಅಧಿಕಾರಕ್ಕೆ ಅನ್ವಯಿಸುವುದಲ್ಲದೇ ಅನುಷ್ಠಾನಕ್ರಮವನ್ನೂ ನಿರ್ದೇಶಿಸುತ್ತವೆ.

ಚೇತನನ ರಕ್ಷಣೆಯು ಅವನ ಹೊಣೆಗಾರಿಕೆ ಅಲ್ಲವಾದರೆ, 1. ಅಚೇತನದಂತೆ ಜಡವಸ್ತುವಾಗಿರಲು ಸಾಧ್ಯವೆ? ಮತ್ತು 2. ಈಶ್ವರನ ಪೂರ್ಣ ರಕ್ಷಣೆಯಲ್ಲಿ ಚೇತನನ ಚಟುವಟಿಕೆಯ ಸ್ವಭಾವವೇನು? ಎಂಬ ಎರಡು ಪ್ರಶ್ನರೂಪದ ಅಂಶಗಳೇ ದ್ವಯ ಎನಿಸಿವೆ. ಇದಕ್ಕೆ ಸಮಂಜಸ ಉತ್ತರವಾಗಿ 'ದ್ವಯಮಂತ್ರ' ಪರಮಾತ್ಮನಿಂದಲೇ ಮಹಾಲಕ್ಷ್ಮಿಗೆ ವಿಷ್ಣುಲೋಕದಲ್ಲಿ ಉಪದೇಶಿಸಲ್ಪಟ್ಟಿತು.

ದ್ವಯ ಮಂತ್ರ :

ಶ್ರೀಮನ್ನಾರಾಯಣ ಚರಣೌ
ಶರಣಂ ಪ್ರಪದ್ಯೇ
ಶ್ರೀಮತೇ ನಾರಾಯಣಾಯ ನಮಃ

ಆಚಾರ್ಯ ರಾಮಾನುಜರ ಸಿದ್ಧಾಂತ ರೀತ್ಯ ಶರಣಾಗತಿಯನ್ನು ಪ್ರತಿಪಾದಿಸುವ ದ್ವಯಮಂತ್ರ 'ಮಂತ್ರ ರತ್ನ'ವೆನಿಸಿದೆ. "ದ್ವಯಂ ಅರ್ಥಾನುಸಂಧಾನೇನ ಸಹ ಸದೈವಂ ವಕ್ತಾ" ಎಂಬ ಭಗವಂತನ ಆದೇಶ, ಶರಣಾಗತಿ ಗದ್ಯದಲ್ಲಿ ಸ್ಪಷ್ಟಪಟ್ಟಿದೆ.

ತಿರುಮಂತ್ರದಲ್ಲಿ ಸಂಕ್ಷೇಪವಾಗಿ ಪ್ರತಿಪಾದಿತವಾದ ಉಪಾಯವನ್ನೇ ಅನುಷ್ಠಾನ ರೂಪದಲ್ಲಿ ಪ್ರತಿಪಾದಿಸಿ ವಿವರಿಸುವುದು ದ್ವಯಮಂತ್ರ, ಹಾಗೂ ಸಾಧ್ಯೋಪಾಯಗಳಿಂದ ಕೂಡಿದ ಪ್ರಕೃತಿ ಧರ್ಮವನ್ನು ತಿಳಿಸುವುದು.

ದ್ವಯಮಂತ್ರದಲ್ಲಿ 'ಶ್ರೀ' ಅಕ್ಷರವು ಎರಡು ವಾಕ್ಯಗಳಲ್ಲಿಯೂ ಇದೆ. ಒಂದರಲ್ಲಿ 'ಶ್ರೀಮತ್' ಎಂದೂ ಮತ್ತೊಂದರಲ್ಲಿ 'ಶ್ರೀಮತೇ' ಎಂದೂ ಇದೆ. ಶ್ರೀಯು ಪುರುಷಕಾರ ದೇವತೆ. ಒಂದುಕಡೆ ಚೇತನರಿಗೆ ವಾತ್ಸಲ್ಯಾತಿಶಯದಿಂದ ಕೈಂಕರ್ಯ ವೃತ್ತಿಯ ಗಮನವನ್ನೂ, ಮತ್ತೊಂದುಕಡೆ ಸರ್ವೇಶ್ವರನಿಗೆ ಶೇಷಳಾಗಿ ನಿತ್ಯಾನಪಾಯಿನಿಯಾಗಿ ವಾಲ್ಲಭ್ಯಾತಿಶಯದಿಂದ ಇರಬೇಕಾದ ಕರ್ತವ್ಯವನ್ನು ದ್ವಯಮಂತ್ರವು ಸೂಚಿಸುತ್ತದೆ. ಈ ವ್ಯವಸ್ಥೆಯಲ್ಲಿ ಸರ್ವಶಕ್ತಿಗೂ ಮತ್ತು ಈಶ್ವರನಿಗೆ ವಿಶೇಷವಾದ ಅಸಾಹಾಯ ಶಕ್ತಿಗೂ ಉಂಟಾಗುವ ಮುಸೆದಾಟದಲ್ಲಿ ಈಶ್ವರನನ್ನು ಕಾರುಣ್ಯವಾತ್ಸಲ್ಯಾದಿಗುಣಪೂರ್ಣನಾಗಿಯೂ ಮತ್ತು ಚೇತನನು ಸ್ವಾಭಾವಿಕವಾಗಿ ಯಾವ ಶಕ್ತಿಸಾಮರ್ಥ್ಯಗಳೂ ಇಲ್ಲದವನನ್ನಾಗಿಯೂ ನಿರ್ಣಯಿಸಲಾಗಿದೆ.

ನೇತೃತ್ವಂ ನಿತ್ಯಯೋಗಂ
ಸಮುಚಿತಗುಣಜಾತಂ ತನುಖ್ಯಾಪನಂ ಚ
ಉಪಾಯಂ ಕರ್ತವ್ಯ ಭಾಗಂ ತು
ಅಥ ಮಿಥುನಪರಂ ಪ್ರಾಪ್ಯಂ ಏವಂ ಪ್ರಸಿದ್ಧಂ।
ಸ್ವಾಮಿತ್ವಂ ಪ್ರಾರ್ಥನಾಂ ಚ ಪ್ರಬಲತರ
ವಿರೋಧಿ ಪ್ರಹಾಣಂ ದಶ್ವೈತಾನ್ ಮಂತಾರಂ
ತ್ರಾಯತೇ ಚ ಇತಿ ಅಧಿಗತಿ ನಿಗಮಃ
ಷಟ್‌ಪದೋ ಅಯಂ ದ್ವಿಖಂಡಃ॥

ದ್ವಯಮಂತ್ರವು ಎರಡು ವಾಕ್ಯಗಳಾಗಿ ಆರು ಪದಗಳಿಂದ ಕೂಡಿದೆ, (ಷಟ್‌ಪದೋ ಅಯಂ ದ್ವಿಖಂಡಃ) ಮತ್ತು ಮೊದಲ ವಾಕ್ಯದಲ್ಲಿ ಆರುಭಾಗಗಳೂ ಎರಡನೆ ವಾಕ್ಯದಲ್ಲಿ ನಾಲ್ಕುಭಾಗಗಳೂ ಇವೆ. ವೇದದ ಆಧಾರದ ಮೇಲೆ ತಿಳಿಯುವುದೇನೆಂದರೆ, ದ್ವಯಮಂತ್ರವನ್ನು ಪೂರ್ಣವಾಗಿ ಅರಿತವನು ಪೂರ್ಣವಾಗಿ ರಕ್ಷಿಸಲ್ಪಡುವನು. (ಅಧಿಗತ ನಿಗಮಃ)

ಚೇತನನಿಂದ ಕೈಂಕರ್ಯದ ಸ್ವೀಕಾರಕ್ಕೆ ಸಮ್ಮತಿಸುವ ಪರಮಾತ್ಮ, ಸೇವೆಯನ್ನು ಸಮರ್ಪಿಸುವ ತ್ವರೆಯಿಂದಿರುವ ಚೇತನ ಮತ್ತು ಈಶ್ವರ ಚೇತನ ಸಂಬಂಧಕ್ಕೆ ಶ್ರೀ ಮಹಾಲಕ್ಷ್ಮಿಯು ಉತ್ತೇಜನ ಕೊಟ್ಟು ಜೀವನ ನಡವಳಿಕೆಯನ್ನು ಈಶ್ವರನಿಗೆ ತೃಪ್ತಿಕರವಾಗಿ ನಡೆಯಿಸಲು ಅನುಕೂಲವಾಗುವಂತಹ ಹತ್ತು ಸೂಕ್ತ ತಿಳುವಳಿಕೆಗಳನ್ನು ಈ ಶ್ಲೋಕದಲ್ಲಿ ಸೂಚಿಸಿದೆ.

1. ಶ್ರೀ ಮಹಾಲಕ್ಷ್ಮಿಯು ಪುರುಷಕಾರ ದೇವತೆ. ಮನ ಒಪ್ಪುವಂತೆ ಮಾಡುವ ಚೇತನ್ಯ ವಿಶೇಷ. ಪರಮಾತ್ಮನ ರಕ್ಷಕತ್ವದಲ್ಲಿರುವ ದೇವಿಯಲ್ಲಿ ಶರಣು (ನೇತೃತ್ವಂ) ಹೋಗದೆ ಭಗವಂತನಲ್ಲಿ ನಾವು ಮಾಡುವ ಪ್ರಪದನವು ಸಫಲವಾಗುವದಿಲ್ಲ.

2. ಶ್ರೀಮನ್ನಾರಾಯಣನಿಗೆ ನಿತ್ಯಾನಪಾಯಿನಿಯಾಗಿ (ನಿತ್ಯಯೋಗಂ) ಯಾವಾಗಲೂ ಅವನ ಹೃದಯದಲ್ಲಿ ವಾಸಿಸುತ್ತಿರುವ ಮಹಾಲಕ್ಷ್ಮಿಗೆ ಪುರುಷಕಾರತ್ವವು ಹೇಳಲ್ಪಡುವುದು. ಚೇತನನಿಗೆ ಮನಸ್ಸಿನಲ್ಲಿ ನಂಬಿಕೆ ಹುಟ್ಟಿಸಿ ಅವನೇ ಪ್ರೀತಿಯಿಂದ

ಶ್ರೀಮತಿ ಬಿ. ಎಸ್. ಮಣಿ

ೖಂಕರ್ಯಪರನಾಗುವ ಹಾಗೆ ಮಾಡುವುದೇ ಆ ಶ್ರೀ' ಯ ಉದ್ದೇಶವಾಗಿದೆ.

3. ಪರಮಾತ್ಮನು ಭಕ್ತರನ್ನು ಬರಮಾಡಿ ಕೊಳ್ಳುವ ಕೃಪೆ, ವಾತ್ಸಲ್ಯ ಸೌಲಭ್ಯ ಮತ್ತು ಸೌಶೀಲ್ಯಾದಿಗುಣಗಳನ್ನು (ಸಮುಚಿತ ಗುಣ ಜಾತಂ)ಹೊಂದಿರುವುದರಿಂದ, ಚೇತನರ ರಕ್ಷಣೆಯು ಕೋರಿಗೆ ಮಣಿಯುವನು. ಭಗವಂತನ ಈ ನಾಲ್ಕು ಗುಣಗಳೇ 'ಆಶ್ರಯ ಸೌಕರ್ಯ'. ಈ ಅತಿಶಯವಾದ ಗುಣಗಳಿರುವುದರಿಂದಲೇ, ಜೀವನು ಸ್ವಾಮಿಯ ಸನ್ನಿಧಿಯನ್ನು ಸಮೀಪಿಸಬಹುದಾಗಿದೆ.

4. ಪರಮಾತ್ಮನ ದಿವ್ಯಮಂಗಳ ವಿಗ್ರಹದ ದರ್ಶನ :- ಜೀವನು ಭಗವಂತನನ್ನು ಸಮೀಪಿಸುವ ಉದ್ದೇಶದಿಂದ ದಿವ್ಯಮಂಗಳ ಮೂರ್ತಿಯನ್ನು ಹಾಗೂ ಭಗವಂತನ ಪವಿತ್ರ ವಿಗ್ರಹದಲ್ಲಿ ಜೀವಕೋಟಿಗೆ ಮುಖ್ಯವಾಗಿ ಆಶ್ರಯಣೀಯವಾದ ಪಾದಯುಗ್ಮವನ್ನು ಪ್ರತಿಪಾದಿಸಲಾಗಿದೆ. (ತನು ವ್ಯಾಪನಂ)

5. ಆ ಪಾದಯುಗ್ಮಗಳಲ್ಲಿ ಚೇತನನು ತನ್ನನ್ನು ಸಮರ್ಪಿಸಿಕೊಳ್ಳುವುದಲ್ಲದೆ, ಪಾದಾಶ್ರಯಣದ ಮಹತ್ವವೇ ಉಪಾಯವು (ಉಪಾಯಂ) ಸಾಧಕನ ಮನೋವೃತ್ತಿಗೆ ಅನುಸಾರವಾಗಿ ಅವನನ್ನು ದೋಷರಹಿತನನ್ನಾಗಿಸಿ, ಆತ್ಮೋನ್ನತಿ ಕಡೆಗೆ ಒಯ್ಯಲು ಭಗವಂತನ ದಿವ್ಯ ಪಾದಗಳೇ ಆಧಾರವಾದುವು.

6. ಪಾದಗಳೇ ಮೋಕ್ಷಕ್ಕೆ ಸಾಧನ ಎಂದು ಪೂರ್ಣ ಭರವಸೆಯನ್ನು ಹೊಂದಿದ ಜೀವಾತ್ಮನು ದೃಢ ನಂಬಿಕೆಯಿಂದ ತಕ್ಕ ಫಲವನ್ನು, ತಾನು ಅರಸುತ್ತಿರುವ ಕಾರಣದಿಂದ ಫಲವು ಸಿದ್ಧಿಸಲೇ ಬೇಕೆಂಬ ಅತೀವ ವಿಶ್ವಾಸವನ್ನು (ಕರ್ತವ್ಯ ಭಾಗಂ) ಪ್ರದರ್ಶಿಸುತ್ತಾನೆ. ಇದೇ ಆ ಭಗವಂತನಲ್ಲಿ ಅನುಗ್ರಹಕ್ಕೆ ಸಹಾಯವಾಗುವ ಪ್ರಾರ್ಥನೆ. ಯೋಗ್ಯತೆಯಿಲ್ಲವೆಂಬ ಶಂಕೆಯಿಂದ ಅನುಗ್ರಹವನ್ನು ನಿಧಾನಿಸಬಾರದೆಂಬ ಪ್ರಾರ್ಥನೆಯನ್ನು ಸಲ್ಲಿಸುವುದೇ ಚೇತನನ ಮುಖ್ಯಗುರಿ.

7. ವಿಷ್ಣುಪತ್ನಿಯಾದ ಶ್ರೀ ಯು ಈ ಜಗತ್ತಿನ ಅಧೀಶ್ವರಿ.ಕರುಣಾಮಯಿಯೂ,ದಿವ್ಯಮಹಿಷಿಯೂ ಆದ ಲಕ್ಷ್ಮಿಯ ಸಹಿತವಾಗಿ ಮಹಾವಿಷ್ಣುವು ಸರ್ವಲೋಕಗಳನ್ನು ರಕ್ಷಿಸುತ್ತಾನೆಂದು ಸಿದ್ಧಾಂತಗಳಲ್ಲಿ ಉಪನಿಷತ್ತುಗಳಲ್ಲಿ ಹೇಳಲ್ಪಟ್ಟಿದೆ. ವಾಕ್ಯಗಳಿಗೆ ಸಿಲುಕದ ಆ ಪರಮಾತ್ಮನ ಸೇವೆಯನ್ನು ಬಯಸುವವನು ತಾಯಿದೇವಿಯನ್ನು ಆಶ್ರಯಿಸಬೇಕು. ಈ ಕೆಲಸಕ್ಕಾಗಿಯೇ ಲಕ್ಷ್ಮಿಯೂ ನಾರಾಯಣನನ್ನು ಬಿಟ್ಟು ಒಂದುಕ್ಷಣವೂ ಇರುವುದಿಲ್ಲವೆಂದು ಶ್ರುತಿಗಳು ಸಾರುತ್ತವೆ. (ಮಿಥುನ ಪರಂ ಪ್ರಾಪ್ಯಂ ಪ್ರಸಿದ್ಧಂ) ಪರಮಾತ್ಮನ ಅವತಾರವಾಗುವಾಗಲೆಲ್ಲಾ ಶ್ರೀದೇವಿಯು ಸಹ ಅವನೊಡನೆ ಅವತಾರ ಮಾಡುವಳು.

8. ಈಶ್ವರನೇ ಸರ್ವಸ್ವಾಮಿ, ಸರ್ವಾಧಿಕಾರಿ ಮತ್ತು ಸರ್ವಕ್ಕೂ ಒಡೆಯ (ಸಾಮಿತ್ವಂ) ಆದ್ದರಿಂದಲೇ ಕೈಂಕರ್ಯ ಸ್ವೀಕರಿಸಲು ಅಧಿಕಾರಿಯಾಗಿರುವನು.

9. ಸಾಧಕನು ಮೊದಲೇ ಅಪ್ಪಣೆ ಪಡೆದು ನಿರೀಕ್ಷಣೆಯ ಫಲಕ್ಕೆ ಕೈಂಕರ್ಯಪರನಾಗಿ ಲಕ್ಷ್ಮಿಯ ಸನ್ನಿಧಿಯಲ್ಲಿ ಸಿದ್ಧನಾಗಿ ಪ್ರಾರ್ಥನೆ (ಪ್ರಾರ್ಥನಾಂ ಚ) ಸಲ್ಲಿಸತಕ್ಕದ್ದು

10. ಈಶ್ವರ, ಚೇತನ ಮತ್ತು ಮಹಾಲಕ್ಷ್ಮಿ –ಈ ಮೂವರುಗಳ ವ್ಯವಹಾರದಲ್ಲಿ ಸೇವಾನಿರತನಾದ ಚೇತನಿಗೆ ವಿರೋಧವಾಗಿ ಒದಗಬಹುದಾದ ತೊಂದರೆಗೆ ಅವಕಾಶವಿಲ್ಲದೆ ದೂರವಾಗಿಸುವುದು. (ಪ್ರಬಲತರ ವಿರೋಧಿ ಪ್ರಹಾಣಂ)

ಈ ಶ್ಲೋಕದಲ್ಲಿ ಶ್ರೀಯಮೂಲಕ ನಾರಾಯಣನ ಸಹಕಾರವನ್ನು ಜೀವನು ತನ್ನರಕ್ಷಣೆ ಮತ್ತು ಅಭ್ಯುದಯಕ್ಕಾಗಿ ಪ್ರಯತ್ನಿಸುತ್ತಾನೆ ಎಂಬುದೇ ಮುಖ್ಯವಲ್ಲ. ಮೊದಲಾಗಿ ಲಕ್ಷ್ಮಿಯ ಸಾನ್ನಿಧ್ಯದಲ್ಲಿ ಶ್ರೀಪತಿಯನ್ನು ಸಮೀಪಿಸಿ ಅವನೊಬ್ಬನೇ ತನ್ನ ರಕ್ಷಕನೆಂಬ ನಂಬಿಕೆ ಮತ್ತು ಇಚ್ಛೆಯನ್ನು ವ್ಯಕ್ತಪಡಿಸಲು ಅನುಮಾನಿಸುವನು, ಆದರೆ ವ್ಯರ್ಥವಾಗಿ ಕಾಲಕಳೆಯಲು ಅವಕಾಶವಿಲ್ಲದೆ ಚೇತನನು ಭಗವಂತನ ಸೇವೆಯಲ್ಲಿ ನಿರತನಾಗಿ ಸಂಭವಿಸಬಹುದಾದ ಎಡರುತೊಡರುಗಳನ್ನು ತಡೆದು, ಜಗನ್ಮಾತೆಯ ಸಾನ್ನಿಧ್ಯದಲ್ಲಿ ಕೈಂಕರ್ಯವನ್ನು ಸ್ವೀಕರಿಸಬೇಕೆಂಬ ಪ್ರಾರ್ಥನೆಯನ್ನೇ ತಿಳಿಯಪಡಿಸಿದೆ.

ಚೇತನನ ಪ್ರತಿಕ್ರಿಯೆ ಮತ್ತು ಅವನ ಮನೋವೃತ್ತಿಯನ್ನು ನಿರ್ಧರಿಸುವುದೆ ಆರನೇ ಶ್ಲೋಕದ ಮುಖ್ಯ ಉದ್ದೇಶ.

ಈಶಾನಾಂ ಜಗತಾಂ ಅಧೀಶದಯಿತಾಂ
ನಿತ್ಯಾನಪಾಯಾಂ ಶ್ರಿಯಂ
ಸಂಶ್ರುತ್ಯ ಆಶ್ರಯಣ ಉಚಿತ ಅಖಿಲ
ಗುಣಸ್ಯ ಅಂಘ್ರೀ ಹರೇಃ ಆಶ್ರಯೇ।
ಇಷ್ಟೋಪಾಯತಯಾ ಶ್ರಿಯಾ ಚ
ಸಹಿತಾಯ ಆತ್ಮೇಶ್ವರಾಯ
ಅರ್ಥಯೇ ಕರ್ತುಂ
ದಾಸ್ಯಂ ಅಶೇಷಂ ಅಪ್ರತಿಹತಂ
ನಿತ್ಯಾಂ ತು ಅಹಂ ನಿರ್ಮಮಃ ॥

ಕೈಂಕರ್ಯದ ಅನುಷ್ಠಾನದಲ್ಲಿ ಮತ್ತು ಫಲದಲ್ಲಿ ಮಮಕಾರದ ಯೋಚನೆ ಸ್ವಲ್ಪವೂ ಇಲ್ಲದೆ, 'ನಾನು' ಎಂಬುದನ್ನು ಮರೆತು ಈಶ್ವರನ 'ಅಹಂ' ಜೊತೆ ಭಾಗಿಯಾಗುವುದರಲ್ಲಿ ವಿಶೇಷವಾದ ಮಹತ್ವವಿದೆ. (ಅಪ್ರತಿಹತಂ ನಿತ್ಯಾಂ ತು ಅಹಂ ನಿರ್ಮಮಃ) ಚೇತನನ ಸೇವೆಯನ್ನು ಸಮರ್ಥಿಸಿ ಒದಗಬಹುದಾದ ತೊಂದರೆಗಳನ್ನು ತಡೆಯಲು ಸಹಾಯಕನಾಗಬಲ್ಲವನು ಈಶ್ವರನೊಬ್ಬನೇ ಎಂಬ ತಿಳುವಳಿ

## ಅರ್ಜಿತ ಅಭಿಷೇಕ
## ಶ್ರೀ ವೆಂಕಟೇಶ್ವರಸ್ವಾಮಿ ದೇವಸ್ಥಾನ, ಮಂಗಾಪುರ

### ಅರ್ಜಿತ ಅಭಿಷೇಕಾಸಕ್ತರಿಗೆ ಹೊಸ ಅವಕಾಶ

ಮಂಗಾಪುರದ ಶ್ರೀ ವೆಂಕಟೇಶ್ವರಸ್ವಾಮಿ ದೇವಸ್ಥಾನದಲ್ಲಿ ಮೂಲ ಮೂರ್ತಿಗೆ ಪ್ರತಿ ಶುಕ್ರವಾರವೂ ಸರ್ಕಾರ್ ಅರ್ಜಿತ ಅಭಿಷೇಕವನ್ನು ಏರ್ಪಡಿಸಲು ಯೋಜಿಸಲಾಗಿದೆ. ರೂ. 100/–ಗಳ ಟಿಕೆಟ್ಟನ್ನು ಪಡೆದ ಇಬ್ಬರಿಗೆ ಹಾಲಿನ ತಂಬಿಗೆಗಳೊಂದಿಗೆ ವಿಮಾನ ಪ್ರಾಕಾರದಲ್ಲಿ ಪ್ರದಕ್ಷಿಣೆಗೂ ಅಭಿಷೇಕ ದರ್ಶನಕ್ಕೂ ಅವಕಾಶ ನೀಡಲಾಗುತ್ತದೆ, ಆಸ್ತಿಕ ಭಕ್ತರು ಈ ಅವಕಾಶವನ್ನು ಬಳಸಿಕೊಂಡು ಕೃತಾರ್ಥರಾಗಬೇಕಾಗಿ ವಿನಂತಿ.

ಕೆಯಿಂದ, ಅನುಷ್ಠಾನಕ್ಕೆ, ಕೈಂಕರ್ಯದಲ್ಲಿ ನಿರತನಾದಾಗ ನಿಬಂಧನವಿಲ್ಲದ ಯಾವಅಡ್ಡಿ ಆತಂಕಗಳೂ ಇಲ್ಲದಿರಬೇಕೆಂಬುದೇ ಚೇತನನ ಹಿರಿಯ ಆಸೆ (ಅಶೇಷಂ ದಾಸ್ಯಂ ಕರ್ತುಂ) ಈ ಆಸೆಯನ್ನು ಈಶ್ವರನಲ್ಲಿ ವ್ಯಕ್ತ ಪಡಿಸಬೇಕೆಂಬುದೇ ಜೀವಾತ್ಮನ ಪ್ರಾರ್ಥನಾರೂಪದ ಮನವರಿಕೆಯಲ್ಲಿ ದೃಢಪಡುತ್ತದೆ.

ಮೂರುಲೋಕಗಳನ್ನು ನಿಯಂತ್ರಿಸುವವನಾದ ನಾರಾಯಣನನ್ನು ಬಿಟ್ಟು ಮಹಾಲಕ್ಷ್ಮಿಯು ಒಂದು ಕ್ಷಣವೂ ಇರಲಾರಳು, ಎಂಬುದು ವೇದ್ಯವಾಗಿದೆ.(ಈಶಾನಾಂ ಜಗತಾಂ ಅಧೀಶದಯಿತಾಂ ನಿತ್ಯಾನಪಾಯಾಂ) ಆ ಭಗವಂತನಿಗೆ ಅವಳಲ್ಲಿರುವ ಪ್ರೇಮಾತಿಶಯವು ಭಗವಂತನ ಕರ್ಮಾಧ್ಯಕ್ಷತ್ವದ ಬಲದಿಂದ ಕೋರುವ ನಿಗ್ರಹಸಂಕಲ್ಪವೂ ಅನುಗ್ರಹವಾಗಿ ತೋರುವಂತಾಗಲು ಕಾರಣವಾಗಿದೆ. ಆದುದರಿಂದ ಜೀವನು ಆ ಶ್ರೀದೇವಿಯನ್ನೇ ಮೊದಲು ಆಶ್ರಯಿಸಲು ನಿಶ್ಚಯಿಸುತ್ತಾನೆ. (ಶ್ರಿಯಂ ಸಂಶ್ರಿತ್ಯ) ಆಮಹಾಲಕ್ಷ್ಮಿಯ ಮೂಲಕ ಉಂಟಾದ ಅನುಗ್ರಹದ ಪ್ರಭಾವವನ್ನು ನಿರಾಕರಿಸಲು ಅಸಾಧ್ಯವೆಂಬುದೇ ಪ್ರಧಾನವಾದುದು. ಜಗನ್ಮಾತೆಯ ಈ ಪ್ರಭಾವವೇ 'ಶಕ್ತಿಸ್ವರೂಪ'. ಈ ಶಕ್ತಿಯು ಮನಸ್ಸಿಗೆ ಇಚ್ಛೆಯಿಲ್ಲದ ಶಿಕ್ಷೆಯ ರೂಪವಾಗಿಲ್ಲದೆ ಅತಿಶಯವಾದ ಕರುಣೆ,ಕ್ಷಮೆ, ಭರವಸೆ, ವಿಶ್ವಾಸ–ಇತ್ಯಾದಿ ಗುಣಗಳಿಂದ ಕೂಡಿದ್ದಾಗಿದೆ.

ಭಗವಂತನು ಚೇತನನ ಸಂಕಷ್ಟಗಳನ್ನು ಪಾರುಮಾಡುವ ಪೂರ್ಣ ನಿರ್ಧಾರವನ್ನು ವ್ಯಕ್ತಪಡಿಸಿರುವ ಕಾರಣ, ಜೀವಾತ್ಮನು ಪರಮಾತ್ಮನ ಪಾದಗಳ ಸಾನ್ನಿಧ್ಯವನ್ನು ಆಶ್ರಯಿಸುತ್ತಾನೆ. (ಆಶ್ರಯಣ ಉಚಿತ ಅಖಿಲಗುಣಸ್ಯ ಅಂಘ್ರೀ ಹರೇಃ ಆಶ್ರಯೇ) ಫಲಿತಾಂಶಕ್ಕಾಗಿ, ಪಾದಾಶ್ರಯಣಕ್ಕೆ ತಡೆಯುಂಟಾಗುವ ನಿಯಮಾವಳಿಗಳ ವ್ಯಾಪ್ತಿಯನ್ನು ಸ್ವಾಮಿಯೇ ಹಿಂದಕ್ಕೆ ಸರಿಸುತ್ತಾನೆ. ಈಶ್ವರನ ಜೊತೆಯಿರಲು ಯೋಗ್ಯನಲ್ಲವೆಂದೂ, ದೋಷಯುಕ್ತನಾದುದರಿಂದ ಆಲಕ್ಷ್ಯಕ್ಕೆ ಕಾರಣನೆಂದೂ, ಸಲ್ಲದ ಆರೋಪಣೆಗಳಿಂದ ಚೇತನನನ್ನು ಬಿಡುಗಡೆ ಮಾಡುತ್ತಾನೆ. ಇದೇ ಸ್ವಾಮಿಯ ಮುಖ್ಯವಾತ್ಸಲ್ಯಾತಿಶಯ. ಆಗ ಸಾಧಕನು ನ್ಯೂನತೆಗಳಿಂದ ಬಿಡಲ್ಪಟ್ಟವನಾಗಿ, ತನ್ನನ್ನು ಕೈಂಕರ್ಯನಿರತನನ್ನಾಗಿ ಒಪ್ಪಿಸಿಕೊಳ್ಳುವನು. ಇದೇ 'ಶರಣಾಗತಿ'– ಶರಣಾರ್ಥಂ, ಆಗತಿಃ. ಜೀವನಲ್ಲಿರುವ ಅಪರಾಧಗಳನ್ನೆಲ್ಲಾ ಮನ್ನಿಸಲು ಸಾಮರ್ಥ್ಯಹೊಂದಿ, ವಿಶ್ವಾಸಪೂರ್ವಕವಾಗಿ ಅಹ್ವಾನಿಸುವ ಅಸ್ತಿತ್ವವೇ ಆ ಪರಬ್ರಹ್ಮ. (ಇಷ್ಟೋಪಾಯತಯಾ)

ಸಾಧಕನನ್ನು ಎಂದೋ ಸ್ವೀಕರಿಸುವುದಾದರೂ ಅದು ತಪ್ಪಿಹೋಗಬಾರದೆಂದು, ಈಶ್ವರನಿಗೆ ಚೇತನನು ತನ್ನಪರವಾಗಿ ಪ್ರಾರ್ಥನೆಯನ್ನು ಶ್ರೀ ಸನ್ನಿಧಿಯಲ್ಲಿ ಸಲ್ಲಿಸುತ್ತಾನೆ. (ಶ್ರಿಯಾ ಚ ಸಹಿತಾಯ ಆತ್ಮೇಶ್ವರಾಯ ಅರ್ಥಯೇ ಕರ್ತುಂ ದಾಸ್ಯಂ ಅಶೇಷಂ) ಸಂಶ್ಲೇಷಕ ಶಕ್ತಿಯಾಗಿ ಚೇತನನನ್ನು ಒಪ್ಪಿಸುವಾಗ ಮತ್ತು ಕೈಂಕರ್ಯನಿರತನನ್ನಾಗಿಸುವಾಗ ಎರಡು ಸಂದರ್ಭಗಳಲ್ಲಿಯೂ ಶ್ರೀ ಲಕ್ಷ್ಮಿಯೇ ಇದ್ದು ಶಾಂತಿ ಅಭ್ಯುದಯಗಳ ರಕ್ಷಣೆಗೆ ಈಶ್ವರ ಮತ್ತು ಜೀವರುಗಳ ಸ್ಥಿತಿ ಮತ್ತು ನಡವಳಿಕೆಗಳನ್ನು ವಿವರಿಸುತ್ತಾಳೆ. ಚೇತನನನ್ನು ದೋಷಗಳಿಂದ ದೂರಮಾಡಿ ಅವನ ಸೇವೆಯನ್ನು ಸ್ವೀಕರಿಸಬಲ್ಲವನೊಬ್ಬನೇ ಆ ಮಹಾವಿಷ್ಣು. ಈ ಸಂದರ್ಭದಲ್ಲಿ ಚೇತನನು ತನ್ನ ಸ್ಥಾನವನ್ನು ಅರಿತು 'ತಾನು ತನಗೆ ಸೇರಿದವನಲ್ಲ, ತನ್ನದೆಂಬುವುದೊಂದೂ ತನಗಿಲ್ಲ,' ಎಂಬ ಮನವರಿಕೆಯನ್ನು ಹೊಂದಿ ಅದಕ್ಕೆ ತಕ್ಕಂತೆ ನಡೆದುಕೊಳ್ಳುವುದೇ ಜೀವನ ಕರ್ತವ್ಯವಾಗಿದೆ.

ಪರಮಾತ್ಮನು ಅಪ್ಪಣೆ ಕೊಡಿಸಿದ ಸೇವೆಯನ್ನು ಪ್ರೀತಿವಿಶ್ವಾಸದಿಂದ ಮನಃಪೂರ್ವಕವಾಗಿ, ಪ್ರತಿ ಫಲದ ಆಸೆ ಅಪೇಕ್ಷೆಗಳಿಲ್ಲದೆ, ಸಲ್ಲಿಸಬೇಕಾದುದೇ ಉತ್ಕೃಷ್ಟ ಸೇವೆ.

ಸೇವೆಯನ್ನು ಭಗವಂತನಿಗೆ ನೇರವಾಗಿಯಾಗಲಿ ಅಥವಾ ಭಾಗವತರ ಮೂಲಕವಾಗಲಿ, ಮಾಡಬಹುದು. ಭಾಗವತರ ಕೈಂಕರ್ಯದಲ್ಲಿ ಭಗವಂತನು ತಾನೇ ಭಾಗಿಯಾಗುತ್ತಾನೆ. ಆದುದರಿಂದ ಭಾಗವತರ ಸೇವೆಯೇ ಭಗವತ್ಪ್ರೀತಿ.

ತಿರುಮಂತ್ರ ಮತ್ತು ದ್ವಯಮಂತ್ರಗಳಲ್ಲಿ ಪ್ರಕಾಶಪಡಿಸಿದ ಉಪಾಯ ವಿಶೇಷವನ್ನು ವಿಧಿರೂಪವಾಗಿ ವಿವರಿಸುವುದು ಮೂರನೆಯ ಮಂತ್ರವಾದ ಚರಮಶ್ಲೋಕ.

ಸರ್ವ ಧರ್ಮಾನ್ಪರಿತ್ಯಜ್ಯ
ಮಾಮೇಕಂ ಶರಣಂ ವ್ರಜ।
ಅಹಂ ತ್ವಾ ಸರ್ವಪಾಪೇಭ್ಯೋ
ಮೋಕ್ಷಯಿಷ್ಯಾಮಿ ಮಾ ಶುಚಃ ॥

ಭಾರತ ಯುದ್ಧಭೂಮಿಯಲ್ಲಿ ರಥದಲ್ಲಿ ಕುಳಿತಿದ್ದಾಗ ಅರ್ಜುನನಿಗೆ ಚರಮಶ್ಲೋಕವನ್ನು ಶ್ರೀ ಕೃಷ್ಣಪರಮಾತ್ಮನು ಉಪದೇಶಿಸಿರುವುದು ತಿಳಿದಿದ್ದೇ ಆಗಿದೆ. ಇದು ಉಪದೇಶ ಮಾತ್ರವಲ್ಲ. ಭಗವಂತನ ಭರವಸೆಯೇ ಆಗಿದೆ.

ಧರ್ಮವು ಸ್ವಂತರಕ್ಷಣೆಗೆ ಒಂದು ಮನೋವೃತ್ತಿ, ಮತ್ತು ಕೈಂಕರ್ಯ. ಕೈಂಕರ್ಯವೇ ಧರ್ಮವಾಗಲಾರದು. ಅದರ ಹಿಂದಿರುವ ಉತ್ತಮ ಮನೋಭಾವವೇ ಸಾರತಮವಾದ ಧರ್ಮ. ಆದ್ದರಿಂದ ಕೈಂಕರ್ಯವು ಧರ್ಮದ ಸ್ಥಿತಿಯನ್ನು ಕಲ್ಪಿಸಿಕೊಳ್ಳುತ್ತದೆ. ಮಾಡುವ ಕಾರ್ಯಗಳಲ್ಲಿ ಕರ್ಮ ಸ್ವಾತಂತ್ರ್ಯವನ್ನೂ ಮತ್ತು ಫಲಾಭಿಸಂಧಿಯನ್ನು ತ್ಯಜಿಸಿ, ಪರಮಾತ್ಮನ ಕೃಪಾವಿಶೇಷವೇ ತನಗೆ ಉಪಾಯ ಎಂಬ ಭಾವನೆ ಇರಬೇಕು.

ಅರ್ಜುನನ ನೆಪದಲ್ಲಿ ಇಡೀ ಜಗತ್ತಿನ ಸಕಲ ಚೇತನರಿಗೂ ದೊರಕಿರುವ ಸಂಜೀವಿನಿ ಇದು.

ಮೋಕ್ಷೋಪಾಯತ್ವೇನ ವಿಹಿತವಾದ ಭಕ್ತಿಯೋಗವೇ ಸರ್ವಧರ್ಮ, ಸರ್ವಶಕ್ತಿ ಮತ್ತು ಪರಮ ಕಾರುಣಿಕನಾದ ಭಗವಂತನೊಬ್ಬನೆ (ಮಾಂ ಏಕಂ) ಪ್ರಧಾನನಾದವನು. ರಕ್ಷಿಸುವ ಸಾಮರ್ಥ್ಯ ಹೊಂದಿರುವ ಪರಮಾತ್ಮನಲ್ಲಿ ಭರಸಮರ್ಪಣ ಮಾಡಬೇಕು. ಅವನೇ ಮುಕ್ತಿಗೆ ಪ್ರತಿಬಂಧಕವಾದ ಸರ್ವಪಾಪಗಳನ್ನು ಹೋಗಲಾಡಿಸುತ್ತಾನೆ. ಇದಕ್ಕಾಗಿ ಸಾಧಕನು ದುಃಖಿಸುವುದು ಬೇಡ. (ಮಾ ಶುಚಃ) ಎಂಬ ಭರವಸೆಯನ್ನು ಶ್ರೀಕೃಷ್ಣನು ಅರ್ಜುನನಿಗೆ ತಿಳಿಸುತ್ತಾನೆ.

ಅಷ್ಟಶ್ಲೋಕಿಯ ಏಳು ಮತ್ತು ಎಂಟನೇ ಶ್ಲೋಕಗಳು ಚರಮಶ್ಲೋಕದ ವಿವರಣೆಯೇ ಆಗಿವೆ.

ಮತ್ಪ್ರಾಪ್ತ್ಯರ್ಥತಯಾ ಮಯೋಕ್ತಂ
ಅಖಿಲಂ ಸಂತ್ಯಜ್ಯ ಧರ್ಮಂ ಪುನಃ
ಮಾಮೇಕಂ ಮದವಾಪ್ತಯೇ ಶರಣಂ
ಇತಿ ಆರ್ತಃ ಅವಸಾಯಂ ಕುರು
ತ್ವಾಂ ಏವಂ ವ್ಯವಸಾಯಯುಕ್ತಮಖಿಲ
ಜ್ಞಾನಾದಿ ಪೂರ್ಣೋ ಹ್ಯಹಂ
ಮತ್ಪ್ರಾಪ್ತಿ ಪ್ರತಿಬಂಧಕೈಃ ವಿರಹಿತಂ
ಕುರ್ಯಾಂ ಶುಚಂ ಮಾ ಕೃಥಾಃ

ಸೇವೆಯನ್ನು ಕೈಕೊಳ್ಳುವ ಉದ್ದೇಶದಿಂದ, ಆ ಮಹಾವಿಷ್ಣುವನ್ನು ಸಮೀಪಿಸಲು (ಮತ್ಪ್ರಾಪ್ತ್ಯರ್ಥತಯಾ) ಸುವ್ಯವಸ್ಥಿತ ಭಾವನೆಯಿಂದ ಅನುಷ್ಠಾನದ ಸರಳವಾದ ಮಾರ್ಗವನ್ನು ಆ ಭಗವಂತನೇ ತಿಳಿಸಿದ್ದನು. (ಮಯೋಕ್ತಂ) ಅದೇ ಎಲ್ಲಾ ಧರ್ಮ ಎಂತಲೂ ಹೇಳಿದ್ದನು. ಆದರೆ ಆ ಎಲ್ಲಾ ಧರ್ಮಗಳನ್ನೂ ಸ್ವಲ್ಪವೂ ಹಿಂಜರಿಯದೆ ಬಿಟ್ಟು, ಬಿಡತಕ್ಕದ್ದು (ಅಖಿಲಂ ಸಂತ್ಯಜ್ಯ ಧರ್ಮಂ) ಅಂದರೆ ಮಾಡುವ ಕರ್ಮಗಳನ್ನು ಭಗವತ್ಕೈಂಕರ್ಯ ರೂಪವಾಗಿ ತಿಳಿದು, ಆ ಕರ್ಮದಲ್ಲಿ ಕರ್ತೃತ್ವಾಹಂಕಾರವನ್ನು ತ್ಯಜಿಸಿ, ಅವುಗಳ ಫಲದಲ್ಲಿ ಆಸೆಯನ್ನು ಇಡದೆ ನಿಸ್ಪೃಹನಾಗಿರಬೇಕು. ಈಶ್ವರನೊಬ್ಬನೇ ಸಾಧಕನನ್ನು ಅಂಗೀಕರಿಸುವ ಶಕ್ತಿ. ತನ್ನನ್ನು ತಾನು ರಕ್ಷಿಸಿಕೊಳ್ಳಲಾರೆನೆಂಬುದನ್ನು ಮನಗಂಡ ಸಾಧಕ ತನ್ನ ವಿಶೇಷತೆಯನ್ನು ತೊಡೆದುಹಾಕಿ, ತನ್ನ ರಕ್ಷಣೆಯಭಾರವನ್ನು

(ಶರಣಂ) ಆ ಭಗವಂತನಲ್ಲಿಡುವನು. ಇಂತಹ ಅಪೃಥಕ್‌ಸಿದ್ಧಿ ವಿಶೇಷಣತ್ತ್ವಜ್ಞಾನವೇ 'ಸಿದ್ಧಿ ಧರ್ಮ'. ಯಾವಾಗಲೂ ಸೇವಾನಿರತನನ್ನಾಗಿಸಿ, ಆ ಪರಮಾತ್ಮನ ಸಾನ್ನಿಧ್ಯವನ್ನು ಅನುಗ್ರಹಿಸುವ ಭಾರವೂ ಆ ಶ್ರೀಮನ್ನಾರಾಯಣನಿಗೇ ಸೇರಿದೆ. (ಮಾ ಮೇಕಂ ಮದವಾಪ್ತಯೇ ಶರಣಂ ಇತಿ ಆರ್ತಃ) ಜೀವಾತ್ಮನಿಗೆ ಶ್ರದ್ಧೆ ಮತ್ತು ನಂಬಿಕೆಗಳೇ ಮುಖ್ಯವಾದುವು. (ಅಪಸಾಯಂ ಕುರು) ಪ್ರಪತ್ತಿ ಕ್ಷೇತ್ರದಲ್ಲಿ ಸಾಧಕನು ಸಹಾಯ ಹೊಂದಲ್ಪಡುವ ಗುಣವಿಶೇಷಣವಿರುವವನೂ ಮತ್ತು ಅಧಿಕಾರ ವಿಶೇಷಣವಿರುವವನೂ ಆಗಿರುವನು. (ತ್ವಾಂ ಏವಂ ವ್ಯವಸಾಯ ಯುಕ್ತಂ) ಈಶ್ವರನು ಎಲ್ಲೆ ಇಲ್ಲದ ಜ್ಞಾನ, ಶಕ್ತಿ ಮತ್ತು ಅಭಿಮಾನವುಳ್ಳವನು. (ಅಖಿಲ ಜ್ಞಾನಾದಿ ಪೂರ್ಣೋ ಹ್ಯಹಂ), ಜೀವಾತ್ಮನು ಭಗವಂತನನ್ನು ಸೇರಲು ವಿರೋಧಿಯಾದ ಸಮಸ್ತ ಪಾಪಗಳನ್ನೂ ಹೋಗಲಾಡಿಸುತ್ತಾನೆ. (ಮತ್ಪ್ರಾಪ್ತಿ ಪ್ರತಿ ಬಂಧಕೈಃ ವಿರಹಿತಂ ಕುರ್ಯಾಂ) ಆದುದರಿಂದ ಸಾಧಕನು ನಿರಾಶೆಯಿಂದ ವ್ಯಸನ ಪಡಬೇಕಾದುದಿಲ್ಲ. (ಶುಚಿಂ ಮಾ ಕೃಥಾಃ) ಎಂದು ಶ್ರೀಮನ್ನಾರಾಯಣನೇ ನೀಡುವ ಭರವಸೆಯಾಗಿದೆ, ಇದು ಈಶ್ವರನ ವಾಗ್ದಾನ.

ಮೋಕ್ಷಾರ್ಥಿಯು ಅನವರತವೂ ಚಟುವಟಿಕೆಯಿಂದ ಕರ್ತವ್ಯನಿರತನಾಗಿ ಅವನ ರಕ್ಷಣೆಯು ಭಗವಂತನಿಗೆ ಸೇರಿದೆ ಎಂದು ತಿಳಿಯತಕ್ಕದ್ದು. ಆ ಸರ್ವೇಶ್ವರನ ಚಟುವಟಿಕೆಗೆ ಒಳಪಡುವ ಅಭಿಲಾಷೆ ವ್ಯಕ್ತಪಡಿಸಿದ್ದೇ ಆದರೆ, ಆಗ ಚೇತನನಿಗೆ ಭಗವಂತನ ಪಾದಾರವಿಂದಗಳಲ್ಲಿ ಆಶ್ರಯ ತಪ್ಪದು ಎಂದು ಭಗವಂತನೇ ತಿಳಿಸುತ್ತಾನೆ.

ಅಷ್ಟಶ್ಲೋಕಿಯ ಕಡೆಯ ಹಾಗೂ ಎಂಟನೆಯ ಶ್ಲೋಕವು, ಆಶ್ರಿತನು ತನ್ನ ದೃಢನಂಬಿಕೆಯನ್ನು ವ್ಯಕ್ತಪಡಿಸುವುದಾಗಿದೆ. ಅವನ ಸ್ವಂತಪ್ರಯತ್ನ ಅಸಂಗತ ಮತ್ತು ಅಸಾಧ್ಯವೆಂದು ತಿಳಿದು ಭಗವಂತನ ರಕ್ಷಣೆಯಲ್ಲಿ ಪೂರ್ಣ ನಂಬಿಕೆಯುಂಟಾಗಿ, ಈಶ್ವರನು ಆಗಲೇ ತಿಳಿಸಿದ ಭರವಸೆಯೇ ನಿಶ್ಚಯವೆಂದು, ಅದು ಎಂದೆಂದಿಗೂ ತಪ್ಪುವುದಿಲ್ಲ ಎಂಬ ಅಂಶವು ಚೇತನನಿಗೆ ಅರಿವಾಗುತ್ತದೆ. ಎಲ್ಲಾ ವಿಧದಲ್ಲಿಯೂ ಚೇತನನು ನಿಸ್ಸಹಾಯಕನು. ಪರಮಾತ್ಮನು ಲೋಕ ರಕ್ಷಣೆಯನ್ನು ಮುಖ್ಯಉದ್ದೇಶವಾಗಿ ಉಳ್ಳವನು; ಇದೇ ಶಾಂತಿ ತರುವಂತಹದ್ದು. ಕಡೆಯಲ್ಲಿ ಜಯಗಳಿಸಿದ ಕೀರ್ತಿಹೊತ್ತ ಒಬ್ಬ ನರನಿಗೆ ಯುದ್ಧಭೂಮಿಯಲ್ಲಿ ಮುಂದಾಗಿ ನಿಯಮಿಸಿಕೊಂಡು ಸಾರಥಿಯಾದ ಶ್ರೀಕೃಷ್ಣ ಪರಮಾತ್ಮನಿಂದ ಈ ಭರವಸೆ ದೊರಕುವಂತಾಯಿತು.

ಜೀವವು ನಿತ್ಯತ್ವದ ಆಶ್ರಯಹೊಂದಿದ್ದರೂ ಕರ್ತವ್ಯಗಳನ್ನು, ಭಾಗಿಗಳಿಗೆ ಯಾವ ಸಂದರ್ಭದಲ್ಲೂ, ಯಾವ ವ್ಯತ್ಯಾಸವೂ ಇಲ್ಲದಂತೆ ನೇಮಿಸಿರುವುದರ ಮೇಲೆ ಸಾಮಾಜಿಕ ಸಂಬಂಧವನ್ನು ಒತ್ತಿಹೇಳುವ ಅವತಾರವೇ ಕೃಷ್ಣಾವತಾರ.

ನಿರೀಕ್ಷೆ ಮತ್ತು ಭಯಗಳ ನಡುವೆ ತೂಗಾಡುತ್ತಿರುವ ಜೀವನಿಗೆ ಚರಮ ಶ್ಲೋಕದ ಸಾರವನ್ನು ಅರಿತನಂತರ ತನ್ನ ದೃಢವಾದ ನಂಬಿಕೆಯೇ ಫಲಿತಾಂಶವಾಗಿದೆ. ಈಶ್ವರನನ್ನೂ ಆತನ, ನುಡಿಯನ್ನೂ ನಂಬದೆ ಇರಲು ಸಾಧ್ಯವಿಲ್ಲ.

ನಿಶ್ಚಿತ್ಯ ತ್ವದಧೀನತಾಂ ಮಯಿ
ಸದಾ ಕರ್ಮಾದ್ಯುಪಾಯಾನ್ ಹರೇ
ಕರ್ತುಂ ತ್ಯಕ್ತುಮಪಿ ಪ್ರಪತ್ತು ಮನಲಂ
ಸೀದಾಮಿ ದುಃಖಾಕುಲಃ ಏತತ್ ಜ್ಞಾನಂ

(25ನೇ ಪುಟ ನೋಡಿ)

## ಶ್ರೀ ಪದ್ಮಾವತೀ ದೇವಾಲಯ



### ಆರ್ಜಿತ ಅಭಿಷೇಕ

ತಿರುಚಾನೂರಿನಲ್ಲಿನ ಶ್ರೀ ಪದ್ಮಾವತೀದೇವಿಯವರಿಗೆ ಪ್ರತಿ ಶುಕ್ರವಾರವೂ ಅರ್ಜಿತ ಅಭಿಷೇಕ ಸೇವೆ ಏರ್ಪಾಟು ಮಾಡಲಾಗಿದೆ. ಟಿಕೆಟ್ಟಿಗೆ ರೂ. 100/- ಸಲ್ಲಿಸಿ ಗೃಹಸ್ಥರು ಭಾಗವಹಿಸಬಹುದು. ಗೃಹಸ್ಥರು, ಅವರ ಸಂಬಂಧೀಕರು ಒಟ್ಟು ಇಬ್ಬರು ಕ್ಷೀರ ಪಾತ್ರೆಗಳನ್ನು ಆಲಯದಲ್ಲಿ ಮೆರವಣಿಗೆಯಲ್ಲಿ ಕೊಂಡು ಹೋಗಲು ಅನುಮತಿಸಲ್ಪಡುವರು. ಅನಂತರ ಅವರು ಅಭಿಷೇಕ ದರ್ಶನ ಮಾಡಬಹುದು. ಆದರೆ ಪ್ರಸಾದಮಾತ್ರ ಕೊಡಲ್ಪಡುವುದಿಲ್ಲ. ಭಕ್ತರು ಈ ಸದವಕಾಶವನ್ನು ಉಪಯೋಗಿಸಿಕೊಳ್ಳಬಹುದು.

# ಕಾಖಂಡಕೀ ಕೃಷ್ಣದಾಸರು

ಕುಲದೈವತವಾದ ಶ್ರೀ ಸ್ವಾಮಿ ಪುಷ್ಕರಿಣಿವಾಸ ಶ್ರೀ ಶ್ರೀನಿವಾಸದೇವರನ್ನು ಶ್ರೀ ಕ್ಷೇತ್ರ ಕಾಖಂಡಕಿಯ ಮಹೀಪತಿಜರಾದ ಶ್ರೀಕೃಷ್ಣದಾಸರು ಮನಸಾರೆ ಕೊಂಡಾಡಿದ್ದಾರೆ.

ಸುಮಾರು ಹದಿನೇಳನೆಯ ಶತಮಾನದ ಪೂರ್ವಾರ್ಧ ಕಾಲ. ಈಗಿನ ಕರ್ನಾಟಕದ ಅಂಗವಾಗಿರುವ ವಿಜಾಪುರ ಪ್ರದೇಶದಲ್ಲಿ ಅಲ್ಲೀಅದಿಲ ಷಹ ಮನೆತನದ ಬಾದಶಹರು ರಾಜ್ಯವಾಳುತ್ತಿದ್ದರು. ಮಹಮ್ಮದೀಯರ ಆಳ್ವಿಕೆಯಲ್ಲಿಯೂ ಸನಾತನ ಧರ್ಮವು ಗುಪ್ತಗಾಮಿನಿಯಾದ ಗಂಗೆಯಂತೆ ಪ್ರವಹಿಸುತ್ತಿತ್ತು. ಅಲ್ಲಿಯ ಅನೇಕ ಸಾಧುಸಂತರು ತಮ್ಮ ಅಧ್ಯಾತ್ಮಿಕ ಜೀವನವನ್ನು ಸರಾಗವಾಗಿ ಸಾಗಿಸಿದ್ದರೆಂದು ಪ್ರಸಿದ್ಧವಾದ 'ಸಾಧು ಪಂಚಕ' ದಿಂದ ತಿಳಿದು ಬರುತ್ತದೆ. ಕಾಖಂಡಕಿಯ ಯೋಗಿ ಮಹೀಪತಿರಾಯರು, ವಿಜಾಪುರದ ರೋಗಿ ಶ್ರೀ ರುಕ್ಮಣಪಂಡಿತರು, ಯಾಳಗಿಯ ತ್ಯಾಗಿ ಶ್ರೀ ರಾಮಪ್ಪಯ್ಯನವರು, ಅಗರಖೇಡದ ಭೋಗಿ ಶ್ರೀ ಕೃಷ್ಣದ್ವೈಪಾಯನರು, ಸಿಂದಗಿಯ ಜೋಗಿ ಶ್ರೀ ಚಿಕ್ಕಪ್ಪಯ್ಯನವರು – ಇವರೇ ಮೊದಲಾದವರು ತಮ್ಮ ಅಧ್ಯಾತ್ಮಿಕ ಪ್ರಭೆಯಿಂದ ಈ ನಾಡಿನಲ್ಲಿ ಬೆಳಗಿದರು; ಜನಸಾಮಾನ್ಯರಲ್ಲಿ ಸನಾತನ ಧರ್ಮ ಜಾಗೃತಿಯನ್ನು ಮಾಡಿದರು. ತನ್ಮೂಲಕವಾಗಿ ಒಡಮೂಡಿದ ಭಕ್ತಿ ಪ್ರವಾಹವು ಕನ್ನಡದಲ್ಲಿ ಕೀರ್ತನೆಗಳ ರೂಪದಲ್ಲಿ ಹೊರಹೊಮ್ಮಿತು. ಯೋಗೀಂದ್ರರಾದ ಕಾಖಂಡಕಿಯ ಮಹೀಪತಿರಾಯರು ಈ ಕೀರ್ತನ ಸಾಹಿತ್ಯಕ್ಕೆ ಪ್ರವರ್ತಕರಾಗಿದ್ದರು. ಅವರ ಮಕ್ಕಳಾದ ಕೃಷ್ಣರಾಯರು ವೈವಿಧ್ಯ ಹಾಗೂ ವೈಶಿಷ್ಟ್ಯಪೂರ್ಣವಾದ ಕೃತಿಗಳನ್ನು ರಚಿಸಿ ಕನ್ನಡ ಸಾಹಿತ್ಯಕ್ಕೆ ಅಮೂಲ್ಯವಾದ ಕಾಣಿಕೆಯನ್ನಿತ್ತರು. ಇದು ಕನ್ನಡಿಗರಾದ ನಮ್ಮೆಲ್ಲರ ಸುದೈವವೆನ್ನಬೇಕು.

ವಿಜಾಪುರ ಜಿಲ್ಲೆಯ ಸಾರವಾಡ ಗ್ರಾಮದಲ್ಲಿದ್ದ ಸದ್ಗುರು ತಪಸ್ವೀ ಭಾಸ್ಕರಸ್ವಾಮಿಗಳು ಪರಮ ಸಾಧ್ವಿಯಾದ ತಿಮ್ಮವ್ವ ಹಾಗೂ ಮಹಾಮಹಿಮರಾದ ಕಾಖಂಡಕಿಯ ಮಹೀಪತಿರಾಯರನ್ನು ಆಶೀರ್ವದಿಸಿ ಅವರ ಉಡಿಯಲ್ಲಿ ಜೋಡುಫಲಗಳನ್ನು ಹಾಕಿದರು.

ನಿನ್ನ ಸಂತತಿ ಸಂಪತ್ತೌಘಾ ।
ನಿನ್ನಲ್ಲಿ ಈಗಾ । ಉನ್ನತವಾಗುವುದು

ಎಂದು ಹರಸಿದರು. ಈ ಅನುಗ್ರಹದ ಫಲವಾಗಿ ದಂಪತಿಗಳಿಗೆ ಇರ್ವರು ಮಕ್ಕಳು ಜನಿಸಿದರು. ಮೊದಲನೆಯ ಮಗು ಕ್ಷಾತ್ರತೇಜಸ್ಸು ಉಳ್ಳವನು. ಅವನೇ ದೇವರಾಯನು. ಎರಡನೆಯ ಮಗು ಲೋಕೋದ್ಧಾರಿಯಾದ ಭಗವದ್ಭಕ್ತನು. ಇವರೇ ನಮ್ಮ ಕಥಾನಾಯಕರಾದ ಕೃಷ್ಣರಾಯರು.

ಅನೇಕ ಮಹಾತ್ಮರ ಜನನ, ಬಾಲ್ಯ, ಜೀವಿತ ಕಾಲ ಮೊದಲಾದ ಚಾರಿತ್ರಿಕ ಅಂಶಗಳು ಅಜ್ಞಾತವಾಗಿರುವಂತೆ ಇಲ್ಲಿಯೂ ಅವುಗಳ ಪೂರ್ಣವಿವರವು ದೊರೆತಿಲ್ಲವೆಂದು ಹೇಳಬೇಕಾಗುತ್ತದೆ. ಆದರೂ ಕೃಷ್ಣರಾಯರ ಬಗ್ಗೆ ಪರಿಚಯವಿದ್ದ ಕೆಲವು ಸಂಗತಿಗಳನ್ನು ನೀಡಲಾಗಿದೆ.

ಚಿಕ್ಕವರಿರುವಾಗಲೇ ದೇವರಾಯ, ಕೃಷ್ಣರಾಯರಿಗೆ ಮಾತೃ ವಿಯೋಗವಾಯಿತು. ಅಂತಃಕರಣದ ಸಾಕಾರಮೂರ್ತಿಯಾದ ಕಕ್ಕಿ– ತುಕ್ಕವ್ವಳೇ ಈ ಅನಾಥಮಕ್ಕಳನ್ನು ಜೋಪಾನ ಮಾಡುವ ಭಾರವನ್ನು ವಹಿಸಿಕೊಂಡಳು. ತಾಯಿಯನ್ನಗಲಿದ ತಬ್ಬಲಿಮಕ್ಕಳು ಹೆಚ್ಚು ಅಚ್ಚಿಯಿಂದ ಬೆಳೆಯುವುದು ಸಹಜ. ಮಹೀಪತಿರಾಯರ ಮಕ್ಕಳ ವಿಷಯದಲ್ಲಿಯೂ ಈ ಮಾತು ಅನ್ವಯಿಸುವುದು. ಈ ಮಕ್ಕಳ ಮನಸ್ಸು ವಿದ್ಯಾಭ್ಯಾಸಕ್ಕೆ ಒಲಿಯದೆ, ಆಟನೋಟಗಳಲ್ಲಿಯೇ ಆಸಕ್ತವಾಗುವುದನ್ನು ಕಂಡು ಕಕ್ಕಿ ತುಕ್ಕವ್ವಳು ಮರುಗಿದಳು; ದೇವರಾಯನ ಪುಂಡಾಟಿಕೆ, ಕೃಷ್ಣರಾಯನ ಉಡಾಳತನವನ್ನು ಕಳೆಯಲು ಪ್ರಯತ್ನಪಟ್ಟಳು. ಅನೇಕಸಲ ಮಹೀಪತಿರಾಯರಿಗೆ ಈ ವಿಷಯ ಹೇಳಿದಳು. ಅವರು ಮಕ್ಕಳ ಮೇಲಿನ ಮಮತೆಯಿಂದ "ಸಮಯಾನುಕೂಲವಾದಾಗ ಎಲ್ಲವೂ ಸರಿಹೋಗುವುದು" ಎಂದು ಶಾಂತರೀತಿಯಿಂದ ಉತ್ತರ ಕೊಡುತ್ತಿದ್ದರು.

ಆಟಗಳೆಂದರೆ ಮಕ್ಕಳಿಗೆ ಹಿಗ್ಗಲ್ಲವೇ? ಒಂದು ದಿನ ಈ ಅಣ್ಣತಮ್ಮಂದಿರು ಕುಣಿದಾಡುತ್ತಾ ಮನೆಯ ಮಾಳಿಗೆಯ ಮೇಲೆ ಪಟ ಹಾರಿಸಲು ಹೋಗಿದ್ದರು. ಗಾಳಿಯ ಭರದಲ್ಲಿ ಗಾಳಿಯ ಪಟವು ಮೇಲಕ್ಕೆ ಹಾರಹತ್ತಿತು. ಪಟದ ದಾರವು ಭರದಿಂದ ಮುಂದಕ್ಕೆ ಎಳೆಯುತ್ತಿರುವಾಗ ದೇವರಾಯನು ಕಾಲು ಜಾರಿ ಕೆಳಗೆ ಬಿದ್ದನು; ಮೈತುಂಬ ಗಾಯಗಳಾದವು. ತುಕ್ಕವ್ವಳು ಔಷಧೋಪಚಾರ ಮಾಡಿದಳು. ಬೆದರಿಸಿ ಬುದ್ಧಿ ಹೇಳಿದಳು. "ಇಂದಿನಿಂದ ಪುಂಡಾಟಿಕೆ ಮಾಡುವುದಿಲ್ಲ, ಹಿರಿಯರ ಮಾತು ಕೇಳಿಕೊಂಡಿರುವೆವು." ಎಂದು ಅಣ್ಣತಮ್ಮಂದಿರರು ಶಪಥ ತೊಟ್ಟರು. ತಾಯಿಯೋಪಾದಿಯಲ್ಲಿದ್ದ ತುಕ್ಕವ್ವಳು ಮಕ್ಕಳಲ್ಲಿ ಈ ಪರಿವರ್ತನೆ ಕಂಡು ಸಂತೋಷಪಟ್ಟಳು.

ಮಾನವನ ಜೀವನದಲ್ಲಿ ಸಂಸ್ಕಾರಗಳಿಗೆ ಹೆಚ್ಚು ಬೆಲೆಯಿದೆ. "ಸಂಸ್ಕಾರಾತ್ ದ್ವಿಜಃ" ಎನ್ನುವಂತೆ ಉಪನಯನ ಸಂಸ್ಕಾರವು ಮಾನವ ಜೀವನದ ಮಟ್ಟವನ್ನು ಉನ್ನತಗೊಳಿಸುತ್ತದೆ. ಇಬ್ಬರೂ ಮಕ್ಕಳ ಉಪನಯನವನ್ನು ವಿಧ್ಯುಕ್ತವಾಗಿ ಜರುಗಿಸಲು ಮಹೀಪತಿರಾಯರು, ತಮ್ಮ ಕುಲಗುರುಗಳಾದ ಪ್ರಹ್ಲಾದಕೃಷ್ಣಾಚಾರ್ಯರನ್ನು ಕರೆಯಿಸಿದರು. ಅವರ ಪೌರೋಹಿತ್ಯದಲ್ಲಿ ಉಪನಯನ ಕಾರ್ಯ ಸಾಂಗಗೊಳಿಸಿದರು. ಮಹಾಮಹಿಮರಾದ ಮಹೀಪತಿರಾಯರೇ (ತಂದೆಯೇ!) ಈ ಮಕ್ಕಳಿಗೆ ಗುರುಸ್ಥಾನದಲ್ಲಿದ್ದುಕೊಂಡು ಸೂಕ್ತ ಸಮಯದಲ್ಲಿ ಜ್ಞಾನೋಪದೇಶ ಮಾಡಲಿ ಎಂದು ಕುಲಗುರುಗಳಾದ ಪ್ರಹ್ಲಾದಕೃಷ್ಣಾಚಾರ್ಯರು ಆದೇಶವಿತ್ತರು. ಮಹೀಪತಿರಾಯರು ಒಂದು ಶುಭ ಮುಹೂರ್ತದಲ್ಲಿ ಅತ್ತಿಗೆ ತುಕ್ಕವ್ವಳನ್ನು ಕರೆದು 'ತಾಯಿ; ಮಕ್ಕಳಿಗೆ ಅಭ್ಯಂಜನ ಮಾಡಿಸು, ಹೊಸ ಬಟ್ಟೆ ತೊಡಿಸು, ನಿನ್ನ ಇಚ್ಛೆಯಂತೆ ಹಾಗೂ ಕುಲಗುರುಗಳ ಅಪ್ಪಣೆಯಂತೆ ಇವರಿಗೆ ಈಗಲೇ ಜ್ಞಾನೋಪದೇಶ ಮಾಡುವೆ' ಎಂದು ಹೇಳಿದರು. ತುಕ್ಕವ್ವಳು ಆ ಇಬ್ಬರೂ ಮಕ್ಕಳನ್ನು ಎರೆದು

ಪುಷ್ಕರಾದ್ಯಾದಿ ತೀರ್ಥಂಗಳಾವನ ಪಾದ– ।
ಪುಷ್ಕರದ ಜಲಕೆ ಸಮಬಾರದೆಂದು ಘನ ।
ಪುಷ್ಕರದ ಸರಿತೆಯಂ ಸಿರದೊಳಾಂತನು ದೈವ ಪುಷ್ಕರದ ಶಾಮನೆಂದು ॥
ಪುಷ್ಕರದಿ ವಾರಿಚರ ನೋಯಿಸೆ ರದನೀಶ ಸಲೆ ।
ಪುಷ್ಕರವನೆತ್ತಿ ಮೊರೆಯಿಡೆ ಬಂದು ಅವನಿತ್ತ ।
ಪುಷ್ಕರವ ಕೊಂಡೊಲಿದೆ ಮಹೀಪತಿಜ ಪ್ರಭು ಸ್ವಾಮಿ ಪುಷ್ಕರಿಣಿವಾಸ ಸಲಹೋ ॥

ವಿದ್ವಾನ್ ಭೀಮಾಚಾರ್ಯ ಗುಡಿ

ಅಲಂಕರಿಸಿ ಸಂತೋಷದಿಂದ ಹತ್ತಿರ ಕರೆದು ಕೊಂಡು ಬಂದಳು. ಅವರೀರ್ವರೂ ತಂದೆಗೆ ಭಯ ಭಕ್ತಿಯಿಂದ ನಮಸ್ಕರಿಸಿದರು. ಗುರುಸ್ಥಾನದಲ್ಲಿದ್ದ ತಂದೆ ಮಹೀಪತಿರಾಯರು ಮಕ್ಕಳ ಮೇಲೆ ತಮ್ಮ ಕೃಪಾದೃಷ್ಟಿ ಬೀರಿ, ಶಿರದ ಮೇಲೆ ವರದಹಸ್ತ ವಿಟ್ಟರು. ಅವರ ಕಿವಿಯೊಳಗೆ ರಹಸ್ಯವಾಗಿ ಬೀಜಾಕ್ಷರ ಮಂತ್ರವನ್ನು ಉಸುರಿದರು. ಗುರುಗಳ ಕೃಪಾಪ್ರಸಾದದಿಂದ ಕೃಷ್ಣರಾಯರಲ್ಲಿ ಆನಂದ ಸ್ಫೂರ್ತಿ ಉಕ್ಕಿಬಂದಿತು. ಅನುಭವದ ವಾಣಿ ನೊಳಗಿತು.

ಏನು ಪುಣ್ಯವ ಮಾಡಿದೆನೋ ಮುನ್ನ ।
ಧನ್ಯಗೈಸಿದ ಗುರು ಮಹೀಪತಿ ತಾನು ॥
ಎನ್ನಯ ಶಿರದಲಿ ಅಭಯ ಕರವಿಟ್ಟು ।
ಚೆನ್ನಾಗಿ ಹೇಳಿದ ಸುಜ್ಞಾನದ ಗುಟ್ಟು ॥
ಕಣ್ಣುತೆರೆಸಿ ಭಕ್ತಿ ಮಾರ್ಗದಲಿ ।
ಸಣ್ಣವನೆಂದು ಚಿದ್ಘನ ತೋರಿಸಲಿ ॥
ಇನ್ನೊಬ್ಬರಾಶೆ ಏತಕೆ ಎನಗಿನ್ನು ।
ಎನ್ನ ಹಂಬಲಿಸಿದಾಶ್ರಯ ಕಾಮಧೇನು ॥
ತಂದೆ ತಾಯಿ ಗುರು ಬಂಧು ಬಳಗಾಗಿ ।
ಕಂದನಿಗೊಲಿದ ನಿಂದು ತನ್ನಯ
ಹೊಣೆಯಾಗಿ ॥

ತಂದೆಯನ್ನೇ ಗುರುವಾಗಿಟ್ಟುಕೊಂಡ ವೈಶಿಷ್ಟ್ಯ ಇವರದು. ಕೃಷ್ಣರಾಯರು ಸ್ವಾನಂದ ಸುಖದ ಅನುಭವವನ್ನು ಸವಿಯುತ್ತಿರುವಾಗ,

ಏನು ಹೇಳಲಿ ಕೌತುಕವಾ ಮಹಾ
ದಾನಿ ಶ್ರೀಗುರು ನಿಜಸ್ವಾನಂದ ಸುಖವಾ
॥ ಪಲ್ಲ ॥

ಧರೆಯೊಳು ತನ್ನ ತಾ ಮರೆದ ಪಾ
ಮರನ ಕರೆದು ಘನ ಕರುಣವಗರೆದಾ
ಶಿರದಿ ನೀಡಿದಭಯಕರವ ಬೀಜಾ
ಕ್ಷರವ ನುಡಿದು ಎನ್ನ ಕಿವಿಯೊಳು ಸುರಿದಾ ೧

ನಯವಾದ ಭಕುತಿಯಲಿ ಬಲಿಸಿ ಎನ್ನ
ನಯನವೆರಡರಲಿ ಮುದ್ರೆಯ ನಿಲಿಸಿ
ಲಯಲಕ್ಷ್ಯ ನೆಲೆಗೊಳಿಸಿ ಚಿನು
ಮಯ ಪ್ರಭೆ ಕುರುಹನು ದೋರಿದ ಸುಳಿಸಿ ೨

ನಾನಾ ಮಾರ್ಗಗಳ ಮರೆಸಿ ನೆರೆ
ಆ ನಿಗಮಾಂತದ ಬೋಧವನೆಚ್ಚರಿಸಿ
ಶ್ರೀನಾಥನ ನೆನುವಿನೊಳರಿಸಿ ಪೊರೆ
ದನು ಗುರು ಮಹೀಪತಿ ಕಂದನನುದ್ಧರಿಸಿ ೩

ತಂದೆ ಗುರುಗಳ ದಿವ್ಯಜ್ಞಾನೋಪದೇಶದಿಂದ ಚೊಕ್ಕ ಬಂಗಾರದಂತೆ ಮಿನುಗುವ ಕೃಷ್ಣರಾಯರು ಆನಂದೋನ್ಮಾದದಿಂದ ಅವರ ಪಾದಕ್ಕೆ ಎರಗಿದರು. ತಾಯಿತುಕ್ಕವ್ವಳೂ ಇತರ ಬಂಧು ಬಾಂಧವರೂ ಈ ಸನ್ನಿವೇಶವನ್ನು ಕಣ್ಣಾರೆ ಕಂಡರು; ಮನವಾರೆ ಹೊಗಳಿದರು. ಗುರು ಭಾಸ್ಕರ ಸ್ವಾಮಿಗಳು ಅನುಗ್ರಹಿಸಿದ ಆಶೀರ್ವಾದದ ಫಲವನ್ನು ನೆನೆಸಿಕೊಂಡರು. ಆನಂದ ತುಂದಿಲರಾದರು.

"ತಂದೆ ಗುಡಿಕಟ್ಟಿಸಿದರೆ ಮಗನು ಕಳಸವಿಟ್ಟನಂತೆ" ಎಂಬ ನಾಣ್ಣುಡಿಯು ಕೃಷ್ಣರಾಯರಿಗೆ ಅನ್ವಯಿಸುವುದು. ಗುರುಸಾರ್ವಭೌಮರಾದ ತಂದೆ ಮಹೀಪತಿರಾಯರ ಅನುಗ್ರಹದಿಂದ ಪಾರಮಾರ್ಥ ವಿದ್ಯೆಯಲ್ಲಿ ಪ್ರಗತಿಯನ್ನು ಸಾಧಿಸ ಹತ್ತಿದರು. ಲೋಕೋದ್ಧಾರದ ಹಾಗೂ ಭಗಬದ್ಭಕ್ತಿಯ ಕಾರ್ಯಗಳಲ್ಲಿ ಮನಸ್ಸು ತೊಡಗಿಸಿದರು.

ಕೃಷ್ಣರಾಯರು ಭಾರತ, ಭಾಗವತ ಸಪ್ತಕಾಂಡರಾಮಾಯಣಾದಿ ಪುರಾಣಗಳನ್ನು, ವೇದ ಶಾಸ್ತ್ರಗಳನ್ನು ಅಭ್ಯಸಿಸಿ, ಅವುಗಳಲ್ಲಿಯ ತತ್ತ್ವಗಳನ್ನು ಸಾಮಾನ್ಯಜನತೆ ಅರಿತುಕೊಳ್ಳಲು ಅನುಕೂಲವಾಗುವಂತೆ; ಕನ್ನಡದಲ್ಲಿ ಕೀರ್ತನೆಗಳನ್ನು ರಚಿಸಿ ಹರಿದಾಸ ಪರಂಪರೆಯನ್ನು ಕಾಯ್ದುಕೊಂಡಿದ್ದಾರೆ. ಕೀರ್ತನೆ ಸಾಹಿತ್ಯದ ಬೆಳವಣಿಗೆಗೆ ಕಾರಣರಾಗಿದ್ದಾರೆ. ಇವರ ಕೀರ್ತನೆಗಳಲ್ಲಿ ಕಂಡು ಬರುವ ಶ್ರೀ ಗುರುಸ್ತವನ, ಶ್ರೀಗುರುಹಾಗೂ ದೇವತಾ ತಾರತಮ್ಯ ಪದ್ಧತಿ, ನಿತ್ಯ ನೈಮಿತ್ತಿಕ ಆಚರಣೆಗಳಿಂದ, ಆಗಮೋಕ್ತ ಉತ್ಸವಗಳಿಂದ, ಇವರು ಶ್ರೀ ಲಕ್ಷ್ಮೀವೆಂಕಟೇಶನಲ್ಲಿ ಅನನ್ಯ ಭಕ್ತಿಯುಳ್ಳವರೆಂದೂ, ಮಧ್ವಸಿದ್ಧಾಂತ ಪ್ರತಿಪಾದಕರೆಂದೂ ಪ್ರಖ್ಯಾತರಾಗಿದ್ದಾರೆ.

'ಗುರುಮಧ್ವಮುನಿರನ್ನ' ಎಂಬ ಕೀರ್ತನೆಯಲ್ಲಿ ಅವತಾರತ್ರಯ (ಹನುಮ, ಭೀಮ, ಮಧ್ವ) ರನ್ನು ಕೊಂಡಾಡಿದ್ದಾರೆ. ಶ್ರೀ ಮಧ್ವಾಚಾರ್ಯರು ದ್ವಾದಶಸ್ತೋತ್ರದಲ್ಲಿ ನಿರೂಪಿಸಿದ 'ಹರಿರೇವಪರೋ, ಹರಿರೇವಗುರು, ಹರಿರೇವ ಜಗತ್, ಪಿತೃ ಮಾತೃ ಗತಿಃ' ಎಂಬ ತತ್ತ್ವಗಳನ್ನು ಕೃಷ್ಣರಾಯರು ಕನ್ನಡದಲ್ಲಿ ಅದೇ ರೀತಿಯಾಗಿ ಹೇಳಿದ್ದಾರೆ.

ಹರಿಯೆ ನಮ್ಮ ಪರದೈವ !
ಹರಿಯೆ ತ್ರಿಭುವನ ಕಾವ !
ಹರಿಯೆ ಇಹಪರವ ನೀವ ಜಗದೊಳಗೆ!
ಇನ್ನು ಹರಿ ಸರಿದೈವವಿಲ್ಲೆಂದು ಹಾಡಿದನು !
ಗುರುಮಹೀಪತಿಯಣುಗನು ॥

ಮೋಕ್ಷವನ್ನು ಅಪೇಕ್ಷಿಸುವ ಜೀವಿಗಳಿಗೆ ಸಂಸ್ಕೃತಭಾಷೆಯಲ್ಲಿರುವ ವೇದ, ಉಪನಿಷತ್ತು, ಶಾಸ್ತ್ರ ಪುರಾಣಗಳ ವ್ಯಾಸಂಗವೇ ಪರಮಾರ್ಥ ಸಾಧನವೆಂದು ಸಂಪ್ರದಾಯವಾದಿಗಳು ನಂಬಿದ್ದರು. ಬಹುಭಾಷಾವಿಶಾರದರಾದ ಕಾಖಂಡಕಿ ಮಹೀಪತಿದಾಸರು ಹಾಗೂ ಅವರ ಮಕ್ಕಳಾದ ಕೃಷ್ಣದಾಸರು ಜನ ಸಾಮಾನ್ಯರಿಗೆ ತಿಳಿಯುವ ಭಾಷೆಯಲ್ಲಿ ಕನ್ನಡದಲ್ಲಿ ಅಧ್ಯಾತ್ಮ ತತ್ತ್ವಗಳನ್ನು ಬಿತ್ತರಿಸಿ ದಾಸವರ್ಗಕ್ಕೆ ಮಾರ್ಗದರ್ಶನ ಮಾಡಿದ್ದಾರೆ. ಶುದ್ಧವಾದ ಭಾವಭಕ್ತಿಯಿಂದ ಕೂಡಿದ, ಪರಮಾತ್ಮನ ಪ್ರಾರ್ಥನೆಗ

ಳಿಗೆ, ಹರಿಕೀರ್ತನೆಗಳಿಗೆ ಪ್ರಾದೇಶಿಕಭಾಷೆಯಾದ ಕನ್ನಡವೇ ಹೆಚ್ಚು ಪರಿಣಾಮಕಾರಿ ಎಂದು ಸಮರ್ಥಿಸಿದ್ದಾರೆ. 'ಕನ್ನಡ ನುಡಿಯೆಂದ್ಹಳಿಯಬ್ಯಾಡಿ' ಎಂದು ಎಚ್ಚರಿಕೆ ಕೊಟ್ಟಿದ್ದಾರೆ 'ಲಲಿತಪದ ಕನ್ನಡದಲಿ ಗಳಿಸಿಕೊಂಡರೆ ಸಾಲದೇ ಸಂಸ್ಕೃತದಲಿನ್ನೇನು ?' ಎಂಬ ನುಡಿಯನ್ನು ಇಲ್ಲಿ ಸ್ಮರಿಸಬೇಕು.

ಲೌಕಿಕ-ಹಾಗೂ ಪಾರಮಾರ್ಥಿಕ ವಿಷಯಗಳಲ್ಲಿ ಪರಿಣತಿ ಹೊಂದುತ್ತಿದ್ದ ಕೃಷ್ಣರಾಯರು ಸ್ವಯಂಸ್ಫೂರ್ತಿಯಿಂದ ಅನೇಕ ಕೀರ್ತನೆಗಳನ್ನು, ಕೃತಿಗಳನ್ನು ರಚಿಸಿದರು. ಒಂದು ದಿನ ಅಕಸ್ಮಾತ್ತಾಗಿ ಇವರ ಸಾಹಿತ್ಯವೆಲ್ಲವೂ ಮಹೀಪತಿರಾಯರ ದೃಷ್ಟಿಗೆ ಬಿದ್ದಿತು. ಅವರು ಅದನ್ನು ಓದಿ ಹತ್ತಿರ ಕರೆದು,

"ಕೃಷ್ಣಾ, ನೀನು ಗ್ರಂಥರಚನೆಗೆ ಕೈಹಾಕಿರುವೆಯಾ?" ಎಂದರು. ಆಗ ಕೃಷ್ಣರಾಯರು ಅಂಜುತ್ತಂಜುತ್ತ ತಾವು ಬರೆದ ಹೊತ್ತಿಗೆಗಳನ್ನು ತೋರಿಸಿದರು. "ಈ ಎಲ್ಲ ಗ್ರಂಥವನ್ನು ಈಗಲೇ ಭಾಗೀರತಿಗೆ ಸಮರ್ಪಿಸಿಬಿಡು" – ಎಂದು ಮಹೀಪತಿರಾಯರು ನುಡಿದರು. "ಇದರಲ್ಲಿಯ ದೋಷಗಳನ್ನು ತಿಳಿಸಿದಲ್ಲಿ, ಅವುಗಳನ್ನು ತಿದ್ದಿ ಗ್ರಂಥವನ್ನು ಪರಿಶುದ್ಧಗೊಳಿಸುವೆ" ಎಂದು ಕೃಷ್ಣರಾಯರು ವಿನಯದಿಂದ ಪ್ರಾರ್ಥಿಸಿಕೊಂಡರು. ಗ್ರಂಥಾರಂಭಕ್ಕೆ ದೇವತಾ ಹಾಗೂ ಗುರುಗಳ ಅನುಗ್ರಹದ ಮಂಗಳಾಚರಣ ಬೇಕು. ಗುರುಸಾನ್ನಿಧ್ಯವಿಲ್ಲದೆ ಗ್ರಂಥರಚನೆಗೆ ಸಾತ್ತ್ವಿಕ ರೂಪ ಬರಲಾರದು. ಇದರಿಂದ ಗ್ರಂಥಕರ್ತರಿಗೂ, ಓದುಗರಿಗೂ, ಕೇಳುವವರಿಗೂ ಕಲ್ಯಾಣವಾಗುವುದಿಲ್ಲ. ಇದನ್ನು ಬೇಗನೆ ಭಾಗೀರತಿಗೆ ಅರ್ಪಿಸಿಬಿಡು. ಇನ್ನು ಮುಂದೆ ನಾನು ಹೇಳಿದಂತೆ ಗ್ರಂಥರಚನೆಗೆ ತೊಡಗು. ಇದಕ್ಕೆ ಶ್ರೀಹರಿಗುರುಗಳ ಆಶೀರ್ವಾದವಿದೆ" ಎಂದರು.

ತಂದೆಯಿಂದ ಮಾರ್ಗದರ್ಶನ ಪಡೆದು ಕೃಷ್ಣರಾಯರ ಕಾವ್ಯಝರಿಯು ಸರಾಗವಾಗಿ ಸರಸವಾಗಿ ಪ್ರವಹಿಸತೊಡಗಿತು. ಶ್ರೇಷ್ಠ ಹರಿದಾಸರಾದ ಅಭಿಜಾತ-ಕವಿಗಳಾದ, ಅಚ್ಚಕನ್ನಡಿಗರಾದ ಕೃಷ್ಣರಾಯರು ಶ್ರೀಕೃಷ್ಣ ಪರಮಾತ್ಮನ ಬಾಲಲೀಲೆ, ಅವತಾರಲೀಲೆ, ಪರಮಾರ್ಥ, ಮುಯ್ಯದ ಹಾಡುಗಳನ್ನು, ಅನೇಕ ಹರಿಕೀರ್ತನೆಗಳನ್ನು ರಚಿಸಿದ್ದಾರೆ. ಕನ್ನಡ ಅಧ್ಯಾತ್ಮಿಕ-ಸಾಹಿತ್ಯಕ್ಕೆ ಕಾಣಿಕೆಯಿತ್ತಿದ್ದಾರೆ. ಪದಕವಿಗಳಾದ ಕೃಷ್ಣರಾಯರ ಸಾಹಿತ್ಯದಲ್ಲಿ ಭಕ್ತಿರಸವು ಓತಪ್ರೋತವಾಗಿ ಹರಿದಿದೆ. ಜಿಜ್ಞಾಸುಗಳಿಗೆ ಅಧ್ಯಾತ್ಮಿಕ ಪದಗಳನ್ನು, ಸಂಪ್ರದಾಯವಾದಿಗಳಿಗೆ ದೇವತಾ ಹಾಗೂ ಗುರುಸ್ತೋತ್ರಗಳನ್ನು, ಭಗದ್ಭಕ್ತರಿಗಾಗಿ ಹರಿಕೀರ್ತನೆಗಳನ್ನು ರಚಿಸಿದ್ದಾರೆ. ಸ್ತ್ರೀಯರಿಗಾಗಿ ಸಾಂಗತ್ಯ, ಜೋಗುಳ, ಸುವ್ವಿ ಪದಗಳನ್ನು ಜನಸಾಮಾನ್ಯರಿಗಾಗಿ ಲಾವಣಿ, ಕೋಲಾಟ, ಕೊರವಂಜಿ, ಹಾಗೂ ಕಾಲಜ್ಞಾನದ ಪದಗಳನ್ನು ಹೇಳಿದ್ದಾರೆ. ಇವರ ಕೃತಿಗಳಲ್ಲಿ ನಾದಮಾಧುರ್ಯ, ಭಾವಪೂರ್ಣತೆ. ಅರ್ಥಸ್ವಾರಸ್ಯಗಳಿವೆ. ಕಿರಿದರೊಳ್ ಪಿರಿದರ್ಥಮಂ ಪೇಳ್ವ ಶೈಲಿ ಇವರದು. ಕನ್ನಡದ ಅನುಭಾವಿಗಳು.

ಧನ್ಯಧನ್ಯ ವಾಯಿತು ಜನುಮ
ಆವ ಪುಣ್ಯವೋ ಅರಿಯೆನಮ್ಮ
ನಾನಾ ಜನ್ಮದ ಬಳೆಯನೆ ಗೆದ್ದು
ಸಲೆ ಮಾನುಷದೇಹದಲಿ ನಿಂದು
ಮಹಾನುಭಾವರ ವಂಶದಿ ಬಂದು
ಅವರ ಸಾನ್ನಿಧ್ಯ ಸೇವೆ ಪಡೆದ
ಜನುಮ ಧನ್ಯ ಧನ್ಯವಾಯಿತು

– ಎಂದು ಕೃಷ್ಣರಾಯರು ಗುರುಸಾನ್ನಿಧ್ಯದಿಂದ ಧನ್ಯತೆ ಪಡೆದುಕೊಂಡರು. ತಂದೆ ಮಹೀಪತಿರಾಯರು ವೃಂದಾವನಸ್ಥರಾದಾಗ ಕೃಷ್ಣರಾಯರು, ತಂದೆ ಮಹೀಪತಿ ನಂದನ ಪ್ರಾಣಾ, ಎಂದೆಂದು ಕರೆಯೆ, ಅವರು ವೃಂದಾವನದಿಂದಲೇ 'ಓಂ' ಎಂದು ಓ ಗೊಟ್ಟರಂತೆ.

ಕೃಷ್ಣರಾಯರು ತಂದೆಯ ಉತ್ತರಕ್ರಿಯೆಗಳನ್ನು ತೀರಿಸಿಕೊಂಡು ಕಾಖಂಡಕಿಗೆ ಬಂದರು. ಆ ದಿನವೇ ಮಹೀಪತಿರಾಯರ ಕೋಣೆಗೆ ಬೆಂಕಿ ಹತ್ತಿ, ರಾಯರಸಾಹಿತ್ಯವು ಸುಟ್ಟು ಭಸ್ಮವಾಯಿತು. ಇದೇನು ಅನಿಷ್ಟ ಸಂಭವಿಸಿತೆಂದು ಕೃಷ್ಣರಾಯರು ದುಃಖಿತರಾಗಿ ಉಪವಾಸ ಮಲಗಿದರು. ರಾಯರು ಕನಸಿನಲ್ಲಿ ಬಂದು "ಕೃಷ್ಣಾ ದುಃಖಿಸಬೇಡ. ನಾನು ಇಲ್ಲಿಯೇ ಇರುವೆ. ನೆನೆದಾಗ ನಿನ್ನ ಮನದಲ್ಲಿ ಕಾಣುವೆ. ನಿನ್ನ ಇಷ್ಟಾರ್ಥ ಪೂರೈಸುವೆ. ನನ್ನ ಕೋಣೆಯಲ್ಲಿಯ ಬೂದಿಯನ್ನು ಕೆದರಿದಾಗ ನಿನಗೆ ಕೆಲವು ಹೊತ್ತಿಗೆಗಳು ಸಿಗುವವು. ಅವುಗಳನ್ನು ಉಪಯೋಗಿಸಿ ಭಕ್ತಿಪ್ರಸಾರ ಮಾಡು. ಭಕ್ತಿ ಸಾಹಿತ್ಯದಲ್ಲಿ ಹೊಸ ಕೃತಿಗಳನ್ನು ರಚಿಸು" ಎಂದು ಅಪ್ಪಣೆಯಿತ್ತರು. ತಂದೆ ಹಾಗೂ ಗುರು ಮಹೀಪತಿರಾಯರ ಮಾತುಗಳನ್ನು ಶಿರಸಾವಹಿಸಿ, ಅದರಂತೆ ನಡೆದು ಕಾಖಂಡಕಿ ಹರಿದಾಸ ಪರಂಪರೆಯ ಪ್ರತಿಷ್ಠಾಪಕರಾಗಿ ಭಕ್ತಿ ಸಾಹಿತ್ಯದ ಪ್ರಚಾರ ಕಾರ್ಯ ಮಾಡಿದರು.

ಇವರು ಒಂದು ಹರಿದಿನದಲ್ಲಿ, ಆಗ ಉತ್ತರಾದಿ ಮಠಾಧೀಶರಾಗಿದ್ದ ಶ್ರೀಶ್ರೀ ಸತ್ಯಪೂರ್ಣಸ್ವಾಮಿಗಳ ಸನ್ನಿಧಾನದಲ್ಲಿ 'ಗಜೇಂದ್ರಮೋಕ್ಷ' ವೆಂಬ ಹರಿಕೀರ್ತನೆಯನ್ನು ಸರಾಗವಾಗಿ ಭಾವ ಭಕ್ತಿಯಿಂದ ಹೇಳುತ್ತಿದ್ದರು. ಗಜೇಂದ್ರನಿಗೆ ಒಲಿದ,

ಘನಶಾಮನು ಮಣಿಕುಂಡಲ
ಮುಕುಟ ವಿರಾಜಿಪ ವರಕೌಸ್ತುಭದಿ।

---

ಪ್ರಾಸಾದಿಕ ಕವಿಗಳಾದ ಶ್ರೀಕೃಷ್ಣರಾಯರು ಬಹುಭಾಷಾ ವಿಶಾರದರಾಗಿದ್ದರೂ ಮಾತೃಭಾಷೆಯಾದ ಕನ್ನಡವನ್ನು ಪೂಜ್ಯಭಾವದಿಂದಲೇ ಕಂಡಿದ್ದಾರೆ. ಭಾಷಾಬಡಿದಾಟವನ್ನು ಅಲ್ಲಗಳೆದಿದ್ದಾರೆ.

ಬರಿ ವಾಚಾಭಿಮಾನವಿದೇಕೆ!
ಹರಿಲೀಲಾಮೃತ ಸೇವಿಸಲಿಕ್ಕೆ ॥ ಪಲ್ಲ ॥
ಸಂಸ್ಕೃತ–ವಂದ್ಯ ಪ್ರಾಕೃತ–ನಿಂದ್ಯ।
ಸುಕೃತಿಗಳಾಡುವುದೇ ಕುಂದಾ ॥ ೧ ॥
ಕನ್ನಡ ನುಡಿಯೆಂದ್ಹಳಿಯ ಬ್ಯಾಡಿ
ಕನ್ನಡಿ ದರ್ಪಣವಲ್ಲವೆ ನೋಡಿ ॥ ೨ ॥
ಕರಿದು ಬಿಳಿದು ಆವಾದರೇನು
ಎರಡಾಗದು ಕ್ಷೀರೆಂದು ತಾನು ॥ ॥ ೩ ॥
ಗುರುವರ ಮಹೀಪತಿ ಪ್ರಭು ಚರಿತಾ।
ಭರಿತಾದುದೇ ಪಾವನ ಚರಿತಾ ॥ ॥ ೪ ॥

ಈ ಪದ್ಯದಲ್ಲಿ ಕನ್ನಡನುಡಿಯ ಮೇಲ್ಮೆಯನ್ನು ಎತ್ತಿ ತೋರಿಸಿದ್ದಾರೆ.

# ತಿರುಮಲೆ
## ಶ್ರೀ ವೆಂಕಟೇಶ್ವರಸ್ವಾಮಿ ಅರ್ಚನಾ ಯೋಜನೆ

ಭಕ್ತರು ತಮ್ಮ ಇಷ್ಟದೈವವಾದ ಶ್ರೀ ವೆಂಕಟೇಶ್ವರಸ್ವಾಮಿಯನ್ನು ಅರ್ಚಿಸಲು ಅನುಕೂಲವಾಗುವಂತೆ ತಿರುಮಲೆ ತಿರುಪತಿ ದೇವಸ್ಥಾನದವರು ಹೊಸದಾಗಿ ಬಾಲಾಜೀ ಅರ್ಚನಾ ಯೋಜನೆಯನ್ನು ಆರಂಭಿಸಿದ್ದಾರೆ.

### ಈ ಯೋಜನೆಯಲ್ಲಿ ಸದಸ್ಯರಾಗುವುದು ಹೇಗೆ?

ನೀವು ಮಾಡಬೇಕಾಗಿರುವುದೆಂದರೆ ಇಂಡಿಯನ್ ಓವರ್‌ಸೀಸ್ ಬ್ಯಾಂಕ್ ಮೂಲಕ ತಿ. ತಿ. ದೇ. ಗಳಿಗೆ ರೂ 5586-00 ಸಲ್ಲಿಸುವುದು. ಇದರ ಪ್ರತಿಫಲವಾಗಿ ಹತ್ತು ವರ್ಷಗಳ ಕಾಲ ವರ್ಷಕ್ಕೊಮ್ಮೆ ನೀವು ಬಯಸಿದ ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಅರ್ಚನೆ ಮಾಡುವ ಮಹದ್ಭಾಗ್ಯ ನಿಮ್ಮದಾಗುತ್ತದೆ.

ನೀವು ಸಲ್ಲಿಸಿದ ಹಣ ಹತ್ತು ವರ್ಷಗಳಲ್ಲಿ 15000 ರೂ ಗಳಾಗಿ ಶ್ರೀ ವೆಂಕಟೇಶ್ವರಸ್ವಾಮಿಗೆ ಸೇರುವುದು. ಹಾಗಾಗಿ ಶ್ರೀ ವೆಂಕಟೇಶ್ವರ ಸ್ವಾಮಿಗೆ ಈ ಮೊತ್ತವನ್ನು ಅರ್ಪಿಸಿದ ತೃಪ್ತಿಯೂ ನಿಮಗೆ ದೊರೆಯುತ್ತದೆ.

### ಸೌಲಭ್ಯಗಳು :

ಅರ್ಚನೆಯ ದಿನದಂದು ದಾನಿಗಳಿಗೆ ತಿರುಮಲೆಯಲ್ಲಿ ವಸತಿ ಸೌಕರ್ಯ ಕಲ್ಪಿಸಲಾಗುತ್ತದೆ. ದಂಪತಿಗಳು ಅರ್ಚನ ಸೇವೆಯಲ್ಲಿ ಪಾಲುಗೊಳ್ಳಬಹುದು. ಕುಟುಂಬದ ಮೂವರಿಗೆ ಸುಪ್ರಭಾತದರ್ಶನ, ಪ್ರತ್ಯೇಕ ದರ್ಶನವುಂಟು. ಜೊತೆಗೇ ಉತ್ತರೀಯ ಅಥವಾ ಕುಪ್ಪುಸದ ಕಣ, ಪ್ರಸಾದಗಳುಂಟು.

**ಕಾರ್ಯನಿರ್ವಹಣಾಧಿಕಾರಿ**
ತಿ. ತಿ. ದೇ.

ವನಜದಳನಯನ ಕಸ್ತೂರಿ ರೇಖೆಯ
ಕಿರುಬೆವರದಿ ॥
ಮನೋಹರ ಮೂರುತಿ ಗರುಡನ ಸ್ಕಂಧದಿ
ಚಕ್ರಾಯುಧ ಧೃತ ಕರದಿ।
ನೆನೆವರ ಬಡತನ ತನ್ನದೆನ್ನುವ
ಕರುಣಾಳು ಬಂದನು ತಾಂ ಭರದಿ ॥

ಎಂದು ಹೇಳುತ್ತಿರುವಾಗ ಶ್ರೀಮನ್ನಾರಾಯಣನು ಅವರ ಸಮ್ಮುಖದಲ್ಲಿ ಪ್ರಕಟವಾದನಂತೆ. ಶ್ರೀಗಳವರು ದ್ವಾದಶಿಯ ಪಾರಣೆ ಮೀಕ್ಕಿದ್ದರೂ ಲೆಕ್ಕಿಸಲಿಲ್ಲ ವಂತೆ! "ಪರಮಾತ್ಮನೇ ಪ್ರತ್ಯಕ್ಷನಾದ ಮೇಲೆ ಇನ್ನೆಲ್ಲಿಯ ಪಾರಣೆ" ಎಂದು ಹೇಳಿದರು. ಆನಂದ ತುಂದಿಲರಾಗಿ ಶ್ರೀಗಳವರು ಹರಿದಾಸ ಕೃಷ್ಣರಾಯರನ್ನು ವಿಶೇಷ ಮರ್ಯಾದೆಯಿಂದ ಅನುಗ್ರಹಿಸಿದರು. ಹೀಗೆ ಅನೇಕ ಕೀರ್ತನೆಗಳನ್ನು ರಚಿಸಿ ಅವುಗಳ ಮುಖಾಂತರ ಭಕ್ತಿ ಹಾಗೂ ಸಾಹಿತ್ಯದ ಪ್ರಸಾರಮಾಡಿ ಶ್ರೇಷ್ಠ ಹರಿದಾಸರೆಂದು ಕೀರ್ತಿಗಳಿಸಿದರು.

ಆರಾಧ್ಯ ದೈವತವಾದ ಶ್ರೀಲಕ್ಷ್ಮೀ ವೆಂಕಟೇಶನನ್ನು, ತಂದೆ ಮಹೀಪತಿರಾಯರ ವೃಂದಾವನವನ್ನು ಆರಾಧಿಸುತ್ತ ಭಕ್ತಿಮಾರ್ಗದಲ್ಲಿಯೇ ತಮ್ಮ ಜೀವನ ಸಾಗಿಸಿದರು.

ಇವರು ವಾಯ್ವಂಶ ಸಂಭೂತರೆಂದೂ, ಅಪರೋಕ್ಷಜ್ಞಾನಿಗಳೆಂದೂ ಪ್ರತೀತಿಯಿದೆ. ಕೃಷ್ಣದಾಸರ ವೃಂದಾವನವು ಕಾಖಂಡಕಿಯಲ್ಲಿಯೇ, ಹಿರಿಯರ ಸನ್ನಿಧಾನದಲ್ಲಿಯೇ ಇದೆ. ಇವರ ಆರಾಧನೆಯು ಮಾಘ ಶುದ್ಧ ದ್ವಾದಶಿಯಂದು ಬಹು ವಿಜೃಂಭಣೆಯಿಂದ ಜರುಗುವುದು. ಅಂದು ವೃಂದಾವನ ಸನ್ನಿಧಾನದಲ್ಲಿ ಶ್ರೀಮಾರುತಿ ದೇವರಿಗೆ ವಿಶೇಷ ಪೂಜೆ ಅಲಂಕಾರಗಳು ನಡೆಯುತ್ತವೆ. 'ಜಯಜಯವೆಂದು ಬೆಳಗುವೆ ಹನುಮಯ್ಯಗೆ' ಎಂಬ ಆರತಿ ಪದ ಹೇಳುವರು.

★

### ಋಗ್ವೇದ

ಮೂಲ–ತೆಲುಗು ವ್ಯಾಖ್ಯಾನ.

ಸಂಪುಟ ಒಂದು ಹಾಗೂ ಎರಡು ಬಿಡುಗಡೆಯಾಗಿವೆ. ತಿ. ತಿ. ದೇ. ಸಮಾಚಾರ ಕೇಂದ್ರಗಳಲ್ಲೆಲ್ಲ ಪ್ರತಿಗಳು ದೊರೆಯುತ್ತವೆ. ಪ್ರತಿಸಂಪುಟದ ಬೆಲೆ ರೂ 100 ಮಾತ್ರ.

ಕೂಡಲೇ ನಿಮ್ಮ ಬಳಿಯ ತಿ. ತಿ. ದೇ. ಸಮಾಚಾರ ಕೇಂದ್ರದಲ್ಲಿ ವಿಚಾರಿಸಿ.

# ಶಂಕರಂ ಲೋಕ ಶಂಕರಮ್

ಭಾರತೀಯ ವೇದಾನ್ತವು ಇಡೀಜಗತ್ತಿನ ಮೇಲೆ ತನ್ನ ಪ್ರಭಾವ ಬೀರಿದೆಯೆಂಬುದು ನಿರ್ವಿವಾದ. ಜೀವ–ಜಗತ್ತು–ಬ್ರಹ್ಮ ಈ ಮೂರು ತತ್ತ್ವಗಳಮೇಲೆ ಆಧಾರಪಟ್ಟಿದೆ – ಸಮಸ್ತ ವೇದಾನ್ತ. ಈ ಮೂರು ತತ್ತ್ವಗಳು ಸತ್ಯವೆಂದವರು ಕೆಲವರು, ಎರಡು ಮಾತ್ರ ಸತ್ಯವೆಂದವರು ಕೆಲವರು, ಬ್ರಹ್ಮವೊಂದೇ ಸತ್ಯ. ಜಗತ್ತು ಮಿಥ್ಯೆ, ಜೀವವೂ ಬ್ರಹ್ಮವೇ ಎಂದವರು ಕೆಲವರು. ಈ ಗುಂಪುಗಳನ್ನು ಮತತ್ರಯವೆಂದರು, ವಿಶಿಷ್ಟಾದ್ವೈತ–ದ್ವೈತ–ಅದ್ವೈತವೆಂದೂ ಕರೆದರು.

ಅದ್ವೈತವನ್ನು ಪುಷ್ಟೀಕರಿಸಿದವರಲ್ಲಿ ಶಂಕರ ಭಗವತ್ಪಾದರು ಅಗ್ರಮಾನ್ಯರು. ಅದ್ವೈತಮತ ಶಂಕರರಿಗಿಂತಲೂ ಮುಂಚೆಯೂ ಇತ್ತು. ದಕ್ಷಿಣದ ಕೇರಳ ಪ್ರಾಂತ್ಯದ ಕಾಲಟಿ ಯೆಂಬ ಗ್ರಾಮದಲ್ಲಿ ಜನ್ಮಿಸಿದ ಈ ವಿಭೂತಿಪುರುಷ, ಚಿನ್ತನಶೀಲ ಮಹಾನ್‌ವ್ಯಕ್ತಿ, ತಪಸ್ವಿ, ಕವಿ, ಜಗದ್ಗುರು ಎಲ್ಲವೂ ಆಗಿದ್ದರು. ವೈಶಾಖ ಶುಕ್ಲ ಪಂಚಮಿ ಇವರ ಜನ್ಮದಿನವೆಂದು ಇವರ ಹೆಸರೇ ಸೂಚಿಸುತ್ತದೆ. ಯ ಎಂಬ ಅಕ್ಷರದಿಂದ ಎಣಿಸುವಾಗ ಐದನೆ ಅಕ್ಷರವೇ ಶ. ಇದು ಪಂಚಮಿಯನ್ನು ಸೂಚಿಸುತ್ತದೆ; ವರ್ಗದ ಪ್ರಥಮಾಕ್ಷರವೇ ಕ. ಇದು ಪ್ರಥಮಪಕ್ಷ – ಶುಕ್ಲಪಕ್ಷವನ್ನು ಸೂಚಿಸುತ್ತದೆ; ಯ ಆದನಂತರ ಎರಡನೆಯ ಅಕ್ಷರವೇ ರ. ಇದು ಎರಡನೆ ಮಾಸ – ವೈಶಾಖವನ್ನು ಸೂಚಿಸುತ್ತದೆ. ಈ ಲೆಕ್ಕದ ಪ್ರಕಾರ ಭಗವತ್ಪಾದರ ಜನನ ವೈಶಾಖಶುದ್ಧ ಪಂಚಮಿ ಎಂದು ಸಿದ್ಧಾಂತವಾಗಿದೆ. ಇವರು ವೇದಮತೋದ್ಧಾರಕರು. ವೈದಿಕಮತವನ್ನು ಪುನರುಜ್ಜೀವನ ಗೊಳಿಸಿದ ಮಹಾಪುರುಷರು. ಪಥಭ್ರಷ್ಟ – ಮತಿಭ್ರಷ್ಟ ಜಗತ್ತಿಗೆ ದಿಶಾದರ್ಶನ ಮಾಡಿದವರು, ಬಾಳಿಗೊಂದು ನಂಬಿಕೆ ಕೊಟ್ಟವರು. ಇವರು ಹಾಕಿದ ಅದ್ವೈತದ ಸುಭದ್ರಬುನಾದಿ ಚಿರಸ್ಥಾಯಿ. ಆ ನಂತರ ಬಂದ ಆಚಾರ್ಯರುಗಳು ಕಾಲಾನುಗುಣವಾಗಿ ತಂತಮ್ಮ ಸಿದ್ಧಾಂತ ಸೌಧಗಳನ್ನು ನಿರ್ಮಿಸಿದರು.

ಪರಮಪೂಜ್ಯ ಶಂಕರ ಭಗವತ್ಪಾದರ ಬಗ್ಗೆ ವಿದ್ವನ್ಮಂಡಲಿಯಲ್ಲಿ ಬಳಕೆಯಲ್ಲಿರುವ ಶ್ಲೋಕವನ್ನು ಗಮನಿಸಿದಾಗ, ಅವರ ಪ್ರತಿಭಾದೀಧಿತಿ ಯಾವ ಮಟ್ಟದಲ್ಲಿತ್ತೆಂದು ಗೋಚರವಾಗುತ್ತದೆ–

ಅಷ್ಟವರ್ಷೇ ಚತುರ್ವೇದಿ
ದ್ವಾದಶೇ ಸರ್ವಶಾಸ್ತ್ರವಿತ್ ।
ಷೋಡಶೇ ಕೃತವಾನ್ ಭಾಷ್ಯ
ದ್ವಾತ್ರಿಂಶೇ ಮುನಿರಭ್ಯಗಾತ್ ॥

ಎಂಟನೇವರ್ಷಕ್ಕೆ ಚತುರ್ವೇದ ಪಾರಂಗತ, ಹನ್ನೆರಡನೇವಯಸ್ಸಿಗೆ ಸಕಲ ಶಾಸ್ತ್ರವೇತ್ತ; ಪ್ರಸ್ಥಾನತ್ರಯಗಳೆಂದು ಪ್ರಸಿದ್ಧವಾಗಿರುವ ವೇದಾನ್ತಸೂತ್ರ, ಉಪನಿಷತ್ತು–ಭಗವದ್ಗೀತೆಗಳಿಗೆ ಭಾಷ್ಯ ಬರೆದಾಗ ಕೇವಲ ಹದಿನಾರರ ಪ್ರಾಯ. ಮುವ್ವತ್ತೆರಡುವರ್ಷಕ್ಕೆ ಅವರ ಐಹಿಕ ಜೀವನ ಮುಕ್ತಾಯವಾಯ್ತು. ಭಗವತ್ಪಾದರಿಗೆ ವಾಸ್ತವವಾಗಿದ್ದ ಆಯುಸ್ಸು ಹದಿನಾರೇವರ್ಷವಂತೆ, –ವ್ಯಾಸರ ಅನುಗ್ರಹದಿಂದ ಇನ್ನು ಹದಿನಾರು ವರ್ಷ ಹೆಚ್ಚಿತಂತೆ!! ಇದೇನೇ ಇರಲಿ – ಇವರು ಕುಶಾಗ್ರಮತಿಗಳೆಂಬುದರಲ್ಲಿ ಸಂದೇಹವಿಲ್ಲ.

ಶಿವಗುರು–ಆರ್ಯಾಂಬೆ ಇವರು ಶಂಕರರ ತಂದೆ ತಾಯಿ. ತಾಯಿಯಿಂದ ಅನುಮತಿ ಪಡೆದು ಸನ್ಯಾಸಗ್ರಹಣಮಾಡಿದ ಶಂಕರರು ಸೇತು ಶೀತಾಚಲ ಪರ್ಯನ್ತ–ಸಮಗ್ರ ಭಾರತದೇಶವನ್ನು ತಮ್ಮ ಪಾದಧೂಳಿಯಿಂದ ಪಾವನ ಗೊಳಿಸಿದ್ದಾರೆ. ಪದ್ಮಪಾದ–ಹಸ್ತಾಮಲಕ–ಸುರೇಶ್ವರಾಚಾರ್ಯ – ತ್ರೋಟಕ ಎಂಬ ನಾಲ್ವರು ಪ್ರಧಾನ ಶಿಷ್ಯರು– ನಾಲ್ಕುವೇದಗಳ ಪ್ರತಿಮೂರ್ತಿಗಳಂತಿದ್ದವರು. ನಮ್ಮ ರಾಷ್ಟ್ರದ ನಾಲ್ಕು ದಿಕ್ಕುಗಳಲ್ಲೂ ಅದ್ವೈತ ಸಂಪ್ರದಾಯದ ಮಠಾಧಿಕಾರಿಗಳಾಗಿ, ಸಂಸ್ಕೃತಿ ಸಂರಕ್ಷಕರಾಗಿ, ಭಾರತೀಯವೇದಾನ್ತ ಭವನದ ಕೀರ್ತಿಕಳಶಗಳಾಗಿ ಬೆಳಗಿದ್ದಾರೆ–ತಮ್ಮ ಗುರುಗಳ ಕೃಪಾಶೀರ್ವಾದದಿಂದ. ಇದರಲ್ಲಿ ಸ್ವಾರಸ್ಯವಾದ ಸಂಗತಿಯೆಂದರೆ ಶಿಷ್ಯರೆಲ್ಲರೂ ವಯಸ್ಸಿನಲ್ಲಿ ಗುರುಗಳಗಿಂತ ದೊಡ್ಡವರು!! ಗೋವಿಂದಭಗವತ್ಪಾದರು ಶಂಕರರ ಗುರುಗಳು. ಅವರು ಅನುಗ್ರಹಿಸಿಕೊಟ್ಟದ್ದೇ ಇಂದೂ ಸಹ ಶೃಂಗೇರಿಯಲ್ಲಿ ಪೂಜೆ ಕೈಗೊಳ್ಳುತ್ತಿರುವ ಚಂದ್ರಮೌಳೀಶ್ವರ, ಹಾಗೂ ರತ್ನಗರ್ಭ ಗಣಪತಿ!! ವಾಕ್ಯಾರ್ಥದಲ್ಲಿ ಭಗವತ್ಪಾದರನ್ನು ಎದುರಿಸಿ ನಿಂತ ಹಲವಾರು ದಿಗ್ಗಂತಿಗಳಿದ್ದರು. ಆದರೇನಂತೆ? ಅವರೆಲ್ಲ ಈ ಜ್ಞಾನ ಭಾಸ್ಕರನ ಮುಂದೆ ಇದ್ದ ಹಿಮದರಾಶಿಗಳು!!

ಬ್ರಹ್ಮಾತ್ಮೈಕತ್ವ ಬೋಧೇನ
ಮೋಕ್ಷಃ ಸಿಧ್ಯತಿ ನಾನ್ಯಥಾ

**ವಿದ್ವಾನ್ ಬ. ನ. ಗುಂಡೂರಾವ್**

ಎಂಬುದೇ ಆಚಾರ್ಯ ಶಂಕರರ ಸಿದ್ಧಾಂತ. ನಿರ್ಗುಣವೂ ನಿರಾಕಾರವೂ, ನಿರ್ವಿಕಾರ ಸ್ವರೂಪವೂ ಆದ ಬ್ರಹ್ಮವಸ್ತು–ತನ್ನನ್ನು ತಾನೇ ವಿವಿಧ ರೂಪಗಳಲ್ಲಿ ಮಾರ್ಪಡಿಸಿಕೊಂಡಿತು. ಪ್ರಾಣಿಗಳು, ಪಶುಪಕ್ಷಿಗಳು, ಕ್ರಿಮಿ ಕೀಟಾದಿಗಳು– ಮಾನವರು–ಹೀಗೆ ಏನೇನೋ ತುಂಬಿರುವ ಬ್ರಹ್ಮಾಂಡವೆಲ್ಲ ಪರಬ್ರಹ್ಮನ ಸ್ವರೂಪವೇ. ಜೀವಾತ್ಮನೆಂದರೇನು? ಉಪಾಧಿ ಶರೀರಗಳಲ್ಲಿ– ಸ್ವಇಚ್ಛೆಯಂತೆ – ಲೀಲಾವಿನೋದಿಯಾಗಿ ಸೇರಿಕೊಂಡ ಬ್ರಹ್ಮವಸ್ತು. ಉಪಾಧಿಗಳ ಆವರಣದಲ್ಲಿದ್ದಾಗ ಜೀವಾತ್ಮನೆಂದೂ, ಆವರಣ ಮುಕ್ತನಾದಾಗ ಬ್ರಹ್ಮವಸ್ತುವೆಂದೂ ಹೆಸರು. ಭಿನ್ನಭಿನ್ನವಾಗಿ ಕಾಣುತ್ತಿರುವುದೆಲ್ಲ ಉಪಾಧಿದೋಷದಿಂದ. ಸ್ಥೂಲಾಕೃತಿಗಳು ಚಿತ್ರವಿಚಿತ್ರವಾಗಿ ಕೋಟಿ ಕೋಟಿ ಸಂಖ್ಯೆಯಲ್ಲಿ ಕಂಡರೇನಂತೆ? ಅವೆಲ್ಲದರಲ್ಲೂ ಅಡಕವಾಗಿರುವ ಚೈತನ್ಯವು, ಅಭಿನ್ನ – ಅಖಂಡ – ಅವಿಭಾಜ್ಯ – ಏಕವಾಗಿದೆಯೆಂಬುದು ಭಗವತ್ಪಾದರ ಸಿದ್ಧಾಂತ. ಆ ಚೈತನ್ಯವೊಂದೇ ಶಾಶ್ವತ. ಉಪಾಧಿಗಳೆಲ್ಲ– ಸ್ಥೂಲಾಕೃತಿಗಳೆಲ್ಲ ಮಿಥ್ಯೆ – ಇದು ಆಚಾರ್ಯರು ಕಂಡ ಪರಮ ಸತ್ಯ. ಇರುವ ಒಂದು ವಸ್ತುವೇ ಅನೇಕವಾಗಿ ಕಂಡು ಬರುತ್ತದೆಂಬುದೇ ಅದ್ವೈತದ ಸ್ವಾರಸ್ಯ. ಸತ್ಯಂ ಜ್ಞಾನಂ ವಿಶುದ್ಧಂ ಸ್ವತಃ ಸಿದ್ಧಂ ಪರಂ ಪ್ರತ್ಯಗಭಿನ್ನಂ ನಿತ್ಯಾನಂದೈಕರಸಂ– ಬ್ರಹ್ಮವಸ್ತುವಿನ ಬಗ್ಗೆ ಹೀಗೆಲ್ಲ ಹೇಳಿದ್ದಾರೆ ಹರಿಯರು. ಭಿನ್ನತೆಯ ಮಧ್ಯೆ ಏಕತೆಯನ್ನು ಕಾಣುವುದೇ ಅದ್ವೈತ. ಏಕತ್ವವನ್ನು ಭಿನ್ನತೆಯೆಂದುಕೊಳ್ಳುವುದೇ ಅಜ್ಞಾನ. ಸಗುಣ ಸಾಕಾರವಾದುದೆಲ್ಲವೂ ನಿತ್ಯಪರಿವರ್ತನಶೀಲ ವಸ್ತುಗಳು. ಅಪರಿವರ್ತನೀಯ ವಸ್ತುವೆಂದರೆ ಬ್ರಹ್ಮವೊಂದೇ. ಅದು ಸ್ಥಾಣು–ಅಚಲ.

ಶಂಕರರ ಅದ್ವೈತಸಿದ್ಧಾಂತ ಕೇವಲ ಶುಷ್ಕ ವೇದಾಂತವಲ್ಲ. ಅದು ಜೀವನಸಿದ್ಧಾಂತ– ಜೀವಂತ ಸಿದ್ಧಾಂತ. ಏಕೆಂದರೆ ಅದು ವಿಜ್ಞಾನದ ಒರೆಗಲ್ಲಿಗೆ ಹಚ್ಚಿದಾಗಲೂ ತನ್ನ ಸಮುಜ್ವಲ ಕಾಂತಿಯನ್ನು ಕಳೆದುಕೊಳ್ಳುವುದಿಲ್ಲ. ಲಕ್ಷ ಲಕ್ಷ ಆಕಾರದ ಗಾಜಿನ ಬುರುಡೆಗಳಿರಬಹುದು–ಅವು ಕೆಡಲೂ ಬಹುದು–ಒಡೆದು ಹೋಗಲೂ ಬಹುದು. ಆದರೆ ಅವುಗಳಲ್ಲಿ ಅನ್ತಶ್ಚೇತನವಾಗಿ ಬೆಳಗುವಂತಹ ವಿದ್ಯುತ್ತಿಗೆಂದೂ ಸಾವಿಲ್ಲ. ಚ್ಯುತಿಯಿಲ್ಲ. ಜಡವಸ್ತುಗಳಿಗೆ ಬದಲಾವಣೆಯುಂಟು – ನಾಶ

ವುಂಟು–ಚೇತನಕ್ಕಿಲ್ಲವೆಂಬುದೇ ವಿಜ್ಞಾನ – ಅದೇ ಅದ್ವೈತ. ಈ ಅದ್ವೈತಭಾವ ಬೆಳೆದಷ್ಟೂ– ಬಲಿತಷ್ಟೂ–ಗೊಂದಲ, ವ್ಯಕ್ತಿದ್ವೇಷ, ವೈಮನಸ್ಯ –ಅಶಾಂತಿ........ಮರೆಯಾಗುತ್ತವೆ. ಇದನ್ನೇ ಆಚಾರ್ಯರು–ದೃಷ್ಟಿಂ ಜ್ಞಾನಮಯೀಂ ಕೃತ್ವಾ ಪಶ್ಯೇದ್ಬ್ರಹ್ಮಮಯಂ ಜಗತ್–ಎಂದರು. ದೃಷ್ಟಿ ಜ್ಞಾನಮಯವಾದಂತೆಲ್ಲ ಸೃಷ್ಟಿ ಬ್ರಹ್ಮಮಯ ವಾಗಿ ಗೋಚರವಾಗುತ್ತದೆ. ಮೋಕ್ಷ, ಆತ್ಮ ದರ್ಶನ, ಸ್ವಸ್ವರೂಪಾನುಸಂಧಾನ, ಅಪರೋಕ್ಷಾನುಭವ, ತ್ರಿಪುಟಿ ರಾಹಿತ್ಯ–ಇವೆಲ್ಲವೂ ಒಂದೇ ಅರ್ಥವನ್ನು ಕೊಡುವ ಮಾತುಗಳು. ಭೇದ ದೃಷ್ಟಿಯ ಅಜ್ಞಾನದಿಂದ ಬಿಡುಗಡೆಗೊಳ್ಳುವುದು– ಅಭೇದ ದೃಷ್ಟಿಯಿಂದ ತನ್ನಲ್ಲಿರುವ ಬ್ರಹ್ಮಚೇತನವೇ ಎಲ್ಲರಲ್ಲೂ ಎಲ್ಲದರಲ್ಲೂ ಇದೆ ಯೆಂದರಿತು ಕೊಳ್ಳುವುದು–ಇದೇ ಸಮಸ್ತ ವೇದಾಂತದ ಮೂಲ ಉದ್ದೇಶ–ಮುಖ್ಯಗುರಿ. ಸರ್ವಸಮತಾ ಭಾವವೇ ಅದ್ವೈತ. ಆತ್ಮವತ್ ಸರ್ವಭೂತಾನಿ ಯ ಪಶ್ಯತಿ ಸ ಪಶ್ಯತಿ!! ಸ್ಥೂಲದೃಷ್ಟಿಗೆ ಕಾಣುವುದು ಸ್ಥೂಲದೇಹಗಳು, ಸೂಕ್ಷ್ಮ ದೃಷ್ಟಿಗೆ ಕಾಣುವುದು ಆತ್ಮ. ಯೋ ಬುದ್ಧೇಃ ಪರತಸ್ತುಸಃ ಎನ್ನುತ್ತದೆ ಗೀತೆ. ಸೂಕ್ಷ್ಮಾತಿ ಸೂಕ್ಷ್ಮವಾದ ಬುದ್ಧಿಯ ವ್ಯಾಪ್ತಿಗೂ ಮೀರಿದ್ದು ಬ್ರಹ್ಮವಸ್ತು. ಇಲ್ಲಿ ಒಂದು ವಿಷಯ ಗಮನದಲ್ಲಿರಿಸಬೇಕು. ವೇದಾಂತದಲ್ಲಿ ಬಳಸಲಾಗುವ–ಬ್ರಹ್ಮ – ಎಂಬುದು, ತ್ರಿಮೂರ್ತಿಗಳಲ್ಲೊಬ್ಬನಾದ ವಾಣೀಪತಿ ಬ್ರಹ್ಮನಲ್ಲ. ತ್ರಿಮೂರ್ತಿಗಳೂ ದೇಹಧಾರಿಗಳೇ ಅವೂ ಉಪಾಧಿ ಶರೀರಗಳೆ. ಉಪಾಧಿರಹಿತವಾದದ್ದು ಬ್ರಹ್ಮವಸ್ತು!!

ಭಕ್ತಿ ನಂಬಿಕೆ ಸುಲಭ, ಮತಿ ಕಾರ್ಯ ಕಷ್ಟ. ಈ ಕಷ್ಟಕರವಾದ ಮತಿಕಾರ್ಯ ಅದ್ವೈತ ವೇದಾಂತ ದಲ್ಲಿ ಅತ್ಯಗತ್ಯಸಾಮಗ್ರಿ. ಮತಿಗೂ ಮೀರಿದ್ದನ್ನು –ಮತಿಗೂ ಪ್ರೇರಕವಾದುದನ್ನು ಮತಿಯಿಂದಲೇ ಅರಿಯುವ ತಂತ್ರ ಅದ್ವೈತ ವೇದಾಂತ. ಭಾವಾದ್ವೈತಂ ಸದಾ ಕುರ್ಯಾತ್ ಕ್ರಿಯಾದ್ವೈತಂ ಕದಾಚನ–ಎಂಬುದು ಸಂದರ್ಭ ಸನ್ನಿವೇಶಗಳಿಗೆ ಅನುಗುಣವಾದ ಸಾಮಾಜಿಕ ಸೂತ್ರ. ತ್ವಯಿಮಯಿ ಸರ್ವತ್ರ ಏಕೋವಿಷ್ಣು – ಎಂಬ ಉದಾತ್ತ ಸಿದ್ಧಾಂತವನ್ನು ಜಗತ್ತಿಗೆ ನೀಡಿದ ಭಗವತ್ಪಾದರ ಮಹಾನ್ ಪ್ರತಿಭೆಗೆ ಅವರ ಭಾಷ್ಯಗ್ರಂಥಗಳು ಸಾಕ್ಷಿಯಾಗಿವೆ–ಅದರಲ್ಲೂ ವೇದಾಂತ ಸೂತ್ರ ಭಾಷ್ಯ. ಆದರೂ ಸಹ ವ್ಯಾಸ ಭಗವಾನರ ಸೂತ್ರ ಸೂರ್ಯನ ಮುಂದೆ, ನನ್ನ ಭಾಷ್ಯವೊಂದು ಕಿರು ಹಣತೆ ಎಂಬ ವಿನಯವೂ ಭಗವತ್ಪಾದರಲ್ಲಿದೆ; ಇದು ಸೌಜನ್ಯ. ಪೂರ್ವಮೀಮಾಂಸಕರು ಕರ್ಮದಿಂದಲೇ ಮುಕ್ತಿಯೆಂದರು. ಆದರೆ ಈ ಪೂಜ್ಯರು ಅದನ್ನು ಸಂಪೂರ್ಣವಾಗಲ್ಲಗಳೆದು ಜ್ಞಾನದಿಂದಲೇ ಮೋಕ್ಷವೆಂದರು. ಜ್ಞಾನ ರಹಿತ ಕರ್ಮ ಕೇವಲ ಯಾಂತ್ರಿಕ. ಸತ್ಕರ್ಮಾನುಷ್ಠಾನ ದಿಂದ ಚಿತ್ತಶುದ್ಧಿಯಾಗುತ್ತದೆ. ಅಡುಗೆ ಮಾಡುವ ಮುಂಚೆ ಪಾತ್ರೆ ತೊಳೆದಂತೆ. ಪಾತ್ರೆತೊಳೆದರೆ ಅಡುಗೆಯಾಯ್ತೇ? ಉಂಡು ತೃಪ್ತರಾದರೋ? ಜ್ಞಾನೋದಯವಾದಂತೆಲ್ಲ ಕರ್ಮವು ತಾನಾಗಿ ಕಳಚಿ ಹೋಗುತ್ತದೆ. ಜ್ಞಾನವೆಂಬ ಬೆಂಕಿಯಿಂದ ಕರ್ಮಗಳು ಸುಟ್ಟು ಹೋಗುತ್ತವೆ, ಸಕಲ ಕರ್ಮಗಳೂ ಜ್ಞಾನದಲ್ಲೇ ಪರಿಸಮಾಪ್ತವಾಗುತ್ತವೆ ..........ಮುಂತಾದ ಅಭಿಪ್ರಾಯಗಳೆಲ್ಲ ಶ್ರೀ ಕೃಷ್ಣ ಕರೋಕ್ತ ಮುಕ್ತಧಾರಾವಿಲಸನ್ಮ ಹಾಗೀತೆ ಯಲ್ಲಿ ಸ್ಪಷ್ಟ ಪಡಿಸಲಾಗಿದೆ. ಒಂದು ಹಂತದ ತನಕ ಕರ್ಮ ಅಗತ್ಯ–ಎಂದು ಹೇಳುವುದಾದರೆ– ಕರ್ಮಮಾಡದೆ ಒಂದೇ ಒಂದು ಕ್ಷಣವಾದರೂ ಇರಲು ಸಾಧ್ಯವಿಲ್ಲ ವೆಂಬ ಗೀತಾವಾಕ್ಯವನ್ನೇನು ಮಾಡುವುದು?

ಜ್ಞಾನಿಯೂ ಕರ್ಮ ಮಾಡುತ್ತಾನೆ; ಅಜ್ಞಾನಿಯೂ ಕರ್ಮಮಾಡುತ್ತಾನೆ. ಆದರೆ ವ್ಯತ್ಯಾಸ ವಿರುವುದು ಕರ್ಮದಲ್ಲಲ್ಲ – ಮಾಡುವ ರೀತಿಯಲ್ಲಿ– ಆಚರಿಸುವ ವಿಧಾನದಲ್ಲಿ. ಜ್ಞಾನಿಯು ಕರ್ಮ ಮಾಡುವ ರೀತಿಯಲ್ಲಿ ಅದು ಅವನಿಗೆ ಯೋಗ ವಾಗುತ್ತದೆ. ಅಜ್ಞಾನಿಯಾದವನು ಕರ್ಮಮಾಡುವ ರೀತಿಯಲ್ಲಿ ಅದು ಅವನಿಗೆ ಬಂಧನವಾಗುತ್ತದೆ. ಎಲ್ಲಿ ಈಶ್ವರಾರ್ಪಣ ಬುದ್ಧಿ ಇದೆ. ಅಲ್ಲಿ ಎಲ್ಲ ಕರ್ಮವೂಯೋಗವೇ. ಎಲ್ಲಿ ಅಹಂಕಾರ ಮಮಕಾರವಿದೆ! ಅಲ್ಲಿ ಕರ್ಮವೆಲ್ಲ ಕೊರಳಿಗೆ ಬಿಗಿದ ಉರುಲು!! ಕರ್ಮವು ಸ್ವತಃ ಜಡ; ಆದರೆ ಉತ್ಥಾನಕ್ಕೂ ಅದೇ ಕಾರಣ, ಪತನಕ್ಕೂ ಅದೇ ಕಾರಣ!!

ವೇದಾಂತವು ಗಗನ ಕುಸುಮವಲ್ಲ. ಅದು ಲೋಕ ಜೀವನ ಸೂತ್ರ. ಸುಸ್ಪಷ್ಟ ಸಮುಚಿತ ಚಿನ್ತನಧಾರೆ. ನಮ್ಮ ದೇಶದ ಪುಣ್ಯಪುರುಷರು ತ್ಯಾಗಿಗಳು, ತಪಸ್ವಿಗಳು–ಯೋಗಿಗಳು ತಮ್ಮ ಬಾಳಜಲಧಿಯನ್ನು ಮಥಿಸಿ ತೆಗೆದ ನವನೀತ– ಅಮೃತ. ಅವರೆಲ್ಲರೂ ಮನುಕುಲದ ಹಿತೈಷಿಗಳು. ಲೋಕಕ್ಷೇಮ ಚಿನ್ತಕರು. ಈ ಪುಣ್ಯ ಪುರುಷರ ಪಾವನ ಪಂಕ್ತಿಯಲ್ಲಿ ಶಂಕರರು ಅಗ್ರಮಾನ್ಯರು. ವೈಶಾಖಮಾಸದಲ್ಲಿ ಅವರನ್ನು ಸ್ಮರಿಸಿ ಕೊಳ್ಳೋಣ. ವೈಶಾಖದ ಸೂರ್ಯನ ಪ್ರಖರತೆ ಶಂಕರರ ಪ್ರತಿಭಾ ಪ್ರಖರತೆ–ಎರಡಕ್ಕೂ ಸಾಮ್ಯವಿದೆ. ಪೂಜ್ಯರ ಪುಣ್ಯಸ್ಮರಣೆ ಹಾಗೂ ಅವರ ವಿಚಾರ ಧಾರೆಯ ಅಧ್ಯಯನ ಮನನ ಅನುಸರಣ ನಮಗೆ ಶ್ರೇಯಸ್ಕರ – ಚೈತನ್ಯದಾಯಕ ಮತ್ತೂ ಶಾಂತಿ ಪ್ರದಾಯಕ. ಲೋಕಕ್ಕೆ ಮಂಗಳವುಂಟು ಮಾಡುವ ಆಚಾರ್ಯ ಭಗವತ್ಪಾದರಿಗೆ ಕೋಟಿ ಕೋಟಿ ನಮನ.

ನಮಾಮಿ ಭಗವತ್ಪಾದಂ
ಶಂಕರಂ ಲೋಕ ಶಂಕರಮ್

## ಕಿಶೋರಜಗತ್

# ದಧೀಚಿ

ಈಗ ನಾವು ಅತ್ಯಂತ ಉದಾರನೂ, ಜ್ಞಾನಿಯೂ ಆದ ಋಷಿಯ ಕತೆ ತಿಳಿಯೋಣ. ಆ ಕಾಲದಲ್ಲಿ ಮಧು ವಿದ್ಯೆಯನ್ನು ತಿಳಿದಾತ ಎಲ್ಲರಿಗಿಂತ ದೊಡ್ಡವನೆನಿಸಿ ಕೊಳ್ಳುತ್ತಿದ್ದ. ಮಹರ್ಷಿ ದಧೀಚಿ ಇದನ್ನು ತಿಳಿದಿದ್ದ. ಈತನ ನಿಜವಾದ ಹೆಸರು ದಧ್ಯಚಿ ಅಥರ್ವಣನೆಂದು. ಒಮ್ಮೆ ಈತನ ಆಶ್ರಮಕ್ಕೆ ಇಂದ್ರ, ಮಧುವಿದ್ಯೆ ಕಲಿಯಲು ಬಂದ. ಆಶ್ರಮದಲ್ಲಿ ಹತ್ತು ಸಾವಿರ ವಿದ್ಯಾರ್ಥಿಗಳು ಓದುತ್ತಿದ್ದರು. ಎಲ್ಲರನ್ನೂ ಋಷಿ ಗುರುತಿಸುತ್ತಿದ್ದ. ಹೊಸಬನನ್ನು ಕಂಡು ಕೇಳಿದ. 'ನಿನ್ನ ಹೆಸರೇನು, ನಿನಗೇನ ಬೇಕು'?

ಇಂದ್ರನು ತನ್ನ ಪರಿಚಯಹೇಳಿ "ನಾನು ಮಧುವಿದ್ಯೆ ಕಲಿಯಲು ಬಂದಿರುವೆ" ನೆಂದ.

ಮಹರ್ಷಿ ಯೋಚನೆಗೀಡಾದ. ಈ ವಿದ್ಯೆಗೆ ಅಧಿಕಾರವಿರುವವನೇ ಅರ್ಹ. ಇಂದ್ರ ಇದಕ್ಕೆ ಅರ್ಹನಲ್ಲ. ಆದರೂ ಇಂದ್ರನಿಗೆ ವಿದ್ಯಾದಾನ ಮಾಡಿ – 'ನೀನು ಭೋಗಿ, ನಿನಗೆ ಈ ವಿದ್ಯೆ ಫಲಿಸದು' ಎಂದು ಹೇಳಿದ. "ಹಾಗಾದರೆ, ನೀವು ಬೇರಾರಿಗಾದರೂ ಈ ವಿದ್ಯೆ ಕಲಿಸದರೆ ನಿಮ್ಮ ಶಿರ ಹಾರಿಬಿಡುವುದು" – ಎಂದು ಇಂದ್ರ ಶಾಪವಿತ್ತ.

ಇಂದ್ರನು ಶಾಪಕೇಳಿ ಋಷಿ ತುಸುವೂ ಹೆದರಲಿಲ್ಲ.

ಬಹಳ ದಿನಗಳ ನಂತರ ದೇವತೆಗಳ ವೈದ್ಯರು ಅಶ್ವಿನೀ ಕುಮಾರರು ಆಶ್ರಮಕ್ಕೆ ಬಂದು ತಮಗೆ ಮಧುವಿದ್ಯೆ ಕಲಿಸಬೇಕೆಂದು ಬೇಡಿದರು.

"ನೀವು ವಿದ್ಯೆಗೆ ಅರ್ಹರು. ನಿಮಗೆ ಕಲಿಸುತ್ತೇನೆ" – ಎಂದು ಹೇಳಿದ ಋಷಿ ಇಂದ್ರ ಶಾಪದ ವಿಷಯವನ್ನು ಹೇಳಿದ.

ಅಶ್ವಿನೀ ಕುಮಾರರು ಖ್ಯಾತ ವೈದ್ಯರು. ಸತ್ತವನನ್ನು ಬದುಕಿಸಬಲ್ಲರು. ಅವರೆಂದರು "ನಾವು ನಿಮ್ಮ ನಿಜವಾದ ತಲೆಯನ್ನು ಕತ್ತರಿಸಿ ಬೇರೆ ಇಟ್ಟು, ಆ ಜಾಗದಲ್ಲಿ ಕುದುರೆಯ ತಲೆಯನ್ನು ಇರಿಸುವೆವು. ನಮಗೆ ವಿದ್ಯಾದಾನ ಮಾಡಿದ ನಂತರ ನಿಮ್ಮ ತಲೆ ಹಾರುವುದು. ಆ ಬಳಿಕ ನಾವು ನಿಜವಾದ ತಲೆ ತಂದಿರಿಸುವೆವು".

ಋಷಿ ಒಪ್ಪಿದ. ಅಶ್ವಿನೀ ಕುಮಾರರು ಹಾಗೇ ಮಾಡಿದರು. ಅವರು ಮಧುವಿದ್ಯೆ ಕಲಿತ ನಂತರ ಇಂದ್ರನ ಶಾಪದಂತೆ ಋಷಿಯ ಕುದುರೆ ತಲೆ ಕತ್ತರಿಸಿ ಬಿತ್ತು. ನಂತರ ಅಶ್ವಿನೀ ಕುಮಾರರು ಋಷಿಯ ನಿಜವಾದ ತಲೆಯನ್ನಿರಿಸಿ, ಸಂತಸದಿಂದ ಮರಳಿದರು. ಋಷಿಯೂ ಪ್ರಸನ್ನನಾದ. ಅಧಿಕಾರೀ ವ್ಯಕ್ತಿಗೆ ವಿದ್ಯೆ ಕಲಿಸಲಾಗಿತ್ತು.

ವಿಷಯ ತಿಳಿದ ಇಂದ್ರ ಲಜ್ಜಿತನಾಗಿ ಕ್ಷಮೆ ಯಾಚಿಸಲು ಆಶ್ರಮಕ್ಕೆ ಬಂದ. ಋಷಿ ತುಂಬ ಉದಾರಿ. ಆತ ಇಂದ್ರನನ್ನು ಕ್ಷಮಿಸಿ, ಆತನಿಗೆ ನಾನಾ ರೀತಿಯಲ್ಲಿ ಬುದ್ಧಿವಾದ ಹೇಳಿದ. ಇಂದ್ರನ ಹೃದಯದಲ್ಲಿನ ಕೊಳೆ ಇದರಿಂದ ಹರಿದು ಹೋಯಿತು. ಆತ ಋಷಿಯನ್ನು ಆದರಿಸತೊಡಗಿದ.

ಬಹಳ ದಿನಗಳ ನಂತರ ದೇವತೆಗಳ ನಗರಕ್ಕೆ ದಾನವರ ಆಕ್ರಮಣವಾಯ್ತು. ದಾನವರ ಮುಖಂಡ ವೃತ್ರಾಸುರ, ಭಯಂಕರನೂ ಬಲಶಾಲಿಯೂ ಆಗಿದ್ದ. ಆತ ಎಲ್ಲ ದೇವತೆಗಳನ್ನು ಅಪಹರಿಸಿದ. ದೇವತೆಗಳು ಚೆಲ್ಲಾಪಿಲ್ಲಿಯಾದರು. ದುಃಖಿತನಾದ ಇಂದ್ರ, ಋಷಿಯ ಆಶ್ರಮಕ್ಕೆ ಬಂದಾಗ, ಎಲ್ಲ ತಿಳಿದ ಋಷಿ ಹೇಳಿದ, "ಆ ನನ್ನ ಕುದುರೆಯ ತಲೆ ಕುರುಕ್ಷೇತ್ರದ ಬಳಿ ಒಂದು ಕೆರೆಯಲ್ಲಿ ಬಿದ್ದಿದೆ. ಅದು ಬಹಳ ಕಠೋರವಾಗಿದೆ. ಅದನ್ನು ನೀನು ತಾ. ಆದರಿಂದ ವಜ್ರ ತಯಾರಿಸಿ ವೃತ್ರಾಸುರನೊಡನೆ ಹೋರಾಡು–ನಿನಗೆ ಜಯವಾಗುತ್ತದೆ"ಎಂದ.

ಇಂದ್ರನು ಹಾಗೆಯೆ ಮಾಡಿ ಕುದುರೆಯ ತಲೆಯಿಂದ ವಜ್ರಾಯುಧವನ್ನೂ, ಇನ್ನೂ, ಅನೇಕ ಆಯುಧಗಳನ್ನೂ ನಿರ್ಮಿಸಿ ವೃತ್ರಾಸುರನನ್ನು ಕೊಂದ.

ನೋಡಿ, ಮಹರ್ಷಿ ಎಷ್ಟು ಉದಾರ; ತನಗೆ ಶಾಪವಿತ್ತು ಕಿರುಕುಳವಿತ್ತವನನ್ನು ಆತ ರಕ್ಷಿಸಿದ.

ಇದೇ ಕತೆ ಇನ್ನೊಂದು ತರದಲ್ಲಿಯೂ ಇದೇ. ಇಂದ್ರನು ದಧೀಚಿಯ ಬಳಿ ಸಹಾಯ ಬೇಡಲು ಹೋದಾಗ ಆತ "ನೀನು ನನ್ನ ಎಲುಬಿನಿಂದ ಆಯುಧ ಮಾಡು..."ಎಂದ. ಈ ಸಲಹೆಯನ್ನು ಬ್ರಹ್ಮನೇ ಇಂದ್ರನಿಗೆ ನೀಡಿದ್ದ. ಇದನ್ನು ತಿಳಿದ ದಧೀಚಿ–ಹಾಗಾದರೆ ಇನ್ನೂ ಒಳ್ಳೆಯದು. ಈ ಶರೀರ ಒಂದಲ್ಲ ಒಂದು ದಿನ ನಷ್ಟವಾಗುತ್ತದೆ. ಇದಕ್ಕಿಂತ ಹೆಚ್ಚಿನದೇನಾಗಬೇಕು? ನನ್ನ ಎಲುಬು ನಿನಗೆ ಉಪಯುಕ್ತವಾದರೆ ಅವಶ್ಯ ಕೊಡುವೆ"–



ಹೀಗೆಂದ ಋಷಿ ಸಮಾಧಿಸ್ಥನಾದ. ಆತನ ಶರೀರವನ್ನು ಕಾಡು ಹಸುಗಳು ನೆಕ್ಕತೊಡಗಿದವು.

ಹೀಗೆ ನೆಕ್ಕಿ ಎಲುಬು ಮಾತ್ರ ಉಳಿದಾಗ ಇಂದ್ರ ಅದರಿಂದ ವಜ್ರಾಯುಧ ಮಾಡಿದ–ಅದರಿಂದ ವೃತ್ರಾಸುರನ ವಧೆಯಾಯಿತು.

ಇನ್ನು ಒಂದು ಕತೆ ಹೀಗೂ ಹೇಳುತ್ತದೆ.

ಒಮ್ಮೆ ದೇವತೆಗಳು ತಮ್ಮಲ್ಲಿದ್ದ ಆಯುಧವನ್ನು ದಧೀಚಿಯ ಆಶ್ರಮದಲ್ಲಿಟ್ಟರು. ಬಹಳ ದಿನಗಳಾದರೂ ಅವರು ಕೊಂಡು ಹೋಗಲಿಲ್ಲ.ಆಗ ಆ ಅಸ್ತ್ರಗಳ 'ತೇಜ' ವನ್ನು ಮಹರ್ಷಿ ಅರೆದು ಕುಡಿದನಂತೆ. ವೃತ್ರಾಸುರನನ್ನು ಕೊಲ್ಲಲು ಇಂದ್ರ ಆಯುಧ ಹುಡುಕಿ ಬಂದಾಗ ಅಲ್ಲೇನೂ ಇರಲಿಲ್ಲ, ಆಗ ಋಷಿ 'ನನ್ನ ಎಲುಬಿನಿಂದ ನೀನು ಅಸ್ತ್ರ ಶಸ್ತ್ರಗಳನ್ನು ಮಾಡಿ ದಾನವರನ್ನು ಕೊಲ್ಲು' ಎಂದನಂತೆ.

ಕತೆಗಳು ಇನ್ನೂ ಇವೆ. ಹಲವನ್ನು ನಂಬಲಾಗವುದಿಲ್ಲ. ಆದರೆ ಅರ್ಥ ಮಾತ್ರ ಸ್ಪಷ್ಟ. ಒಂದನೆಯದು; ನಮಗೆ ಅಪಕಾರ ಮಾಡಿದವನಿಗೂ ಸಂದರ್ಭ ಬಿದ್ದರೆ ನಾವು ಉಪಕಾರವನ್ನೇ ಮಾಡಬೇಕು.

ಎರಡನೆಯದು; ಪುರಾತನ ಕಾಲದಲ್ಲಿ ತಪೋವನದ ಋಷಿಗಳು ಕೇವಲ ಹವನ, ಹೋಮ, ಮಂತ್ರಪಾಠಗಳಷ್ಟೇ ತಿಳಿದವರಲ್ಲದೆ ಯುದ್ಧ ವಿದ್ಯೆಯಲ್ಲಿಯೂ ನಿಪುಣರಾಗಿದ್ದರು. ಹಲವಾರು ರೀತಿಯ ಆಯುಧಗಳ ರಚನೆಯೂ ಅವರಿಗೆ ತಿಳಿದಿತ್ತು : ದಧೀಚಿ ವಜ್ರಾಯುಧವೆಂಬ ಅಸ್ತ್ರ ಇಂದ್ರನಿಗಿತ್ತ. ಇಂದ್ರ ಅದರಿಂದ ವೃತ್ರಾಸುರನನ್ನು ಕೊಂದು ರಾಜ್ಯ ಮರಳಿ ಪಡೆದ.

ಈ ರೀತಿ ದಧೀಚಿ ದಾನಿಯೂ, ಜ್ಞಾನಿಯೂ ಆಗಿದ್ದ. ಆತನ ಮದುವೆ ಅಗಸ್ತ್ಯನ ಮಡದಿ ಲೋಪಾಮುದ್ರೆಯ ತಂಗಿ ಸುವರ್ಚಳ ಜೊತೆ ಗಾಯಿತು. ಅವನಿಗೆ ಇಬ್ಬರು ಮಕ್ಕಳಿದ್ದರು. ಸಾರಸ್ವತ ಮತ್ತು ಪಿಪ್ಪಲಾದ. ಇಬ್ಬರೂ ತಂದೆಯಂತೆ ತಪಸ್ವಿಗಳೂ,ಜ್ಞಾನಿಗಳೂ ಆಗಿದ್ದರು.

'ರಸಿಕಪುತ್ರಿಗೆ'

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ.

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.

* ಆಂಧ್ರಪ್ರದೇಶ್ ಪಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7-ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ. ಗೋವಿಂದ ಪ್ರಸಾದ ಕ್ಯಾಂಟೀನ್,

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ.

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಕೆ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8-30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೆ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ.

(16ನೇ ಪುಟದಿಂದ)

ಉಪೇಯುಷೋ, ಮಮ ಪುನಃ
ಸರ್ವಾಪರಾಧಕ್ಷಮಂ ಕರ್ತಾಸೀತಿ
ದೃಢೋಸ್ಮಿ ತೇ ತು ಚರಮಂ
ವಾಕ್ಯಂ ಸ್ಮರಂ ಸಾರಥೇಃ ॥

ಏಕಪ್ರಕಾರವಾಗಿ ಚೇತನನು ಅಪನಂಬಿಕೆಗೆ ಅವಕಾಶವಿಲ್ಲದಂತೆ (ನಿಶ್ಚಿತ್ಯ) ಶಾಶ್ವತವಾಗಿ ಆ ಪರಮಾತ್ಮನೊಂದಿಗೇ ಸೇರಿದವನು, ಯಾವಾಗಲೂ ಭಗವಂತನಿಗೆ ಅಧೀನನಾದವನು. ಪ್ರತ್ಯೇಕಿಸಲಾರದ ವಿಶೇಷಣವಾಗಿರುವನು. (ತ್ವದಧೀನತಾಂ ಸದಾ ಮಯಿ).

ಶೃಂಖಲೆಗಳಿಂದ ಬಿಡುಗಡೆಹೊಂದಲು ವೇದದಲ್ಲಿ ನಿರ್ದೇಶಿಸಿರುವ ಕರ್ಮ, ಜ್ಞಾನ, ಭಕ್ತಿ–ಇವು ಮೂರೂ, ಚೇತನನು ಅನುಸರಿಸಬೇಕಾದ ಮಾರ್ಗಗಳು. ಈ ನಿಶ್ಚಿತ ಕ್ರಮಗಳು ಸಾಧಕನಿಗೆ ಸಹಾಯಕಾರಿಗಳಾಗಿರುವುವಲ್ಲದೆ, ಅಸಂಪೂರ್ಣತೆ ಮತ್ತು ಭ್ರಷ್ಟತೆಗಳ ವಿರುದ್ಧ ವರ್ತಿಸುವುವು (ಕರ್ಮಾದ್ಯುಪಾಯಾ) ಚೇತನನು ಸ್ವಾತಂತ್ರ್ಯಹೊಂದಿ ಕಾರ್ಯಗತಮಾಡಲು ಒಪ್ಪಿ, ಶಕ್ತಿಸಾಮರ್ಥ್ಯಗಳು ಇದ್ದಾಗ ಮಾತ್ರ ಈ ಮಾರ್ಗಗಳು ಅರ್ಥವತ್ತಾಗುತ್ತವೆ. ಆದರೆ ಮೂಲಭೂತ ಸ್ವಭಾವವಾದ ಚೇತನನ ಪೂರ್ಣ ಅವಲಂಬನ ಗುಣವನ್ನು ಈ ಕಾರ್ಯಕ್ರಮವು ಉಲ್ಲಂಘಿಸುತ್ತವೆ.

ಕರ್ಮ, ಜ್ಞಾನ, ಭಕ್ತಿ ಇವುಗಳಿಂದ ತಪ್ಪಿಸಿಕೊಳ್ಳಲು ಅಸಾಧ್ಯ. (ಹರೇ ಕರ್ತುಂ ತ್ಯಕ್ತುಂ) ಅವು ಈ ಪ್ರಪಂಚದಲ್ಲಿ ತಪ್ಪಿಸಿಕೊಳ್ಳಲಾರದಂತಹ ಉಪಯುಕ್ತ ಸಲಕರಣೆಗಳು. ಅವುಗಳೊಡನೆ ಸಂಪರ್ಕ ನಿರಾಕರಣೆಯೂ ಅಸಾಧ್ಯ. ಇದರ ಪರಿಣಾಮವಾಗಿ ಆಸಕ್ತಿ ಉಂಟಾಗಿ, ಚೇತನನನ್ನು ಸ್ವಾತಂತ್ರ್ಯದಕಡೆಗೆ ತೊಡಗಿಸುತ್ತದೆ. ಆದರಿಂದ ಮುಂದೆ ಸರಿಯುವುದು ಅಥವ ಹಿಂದೆ ಸರಿಯುವುದು ಎರಡನ್ನು ಸರಿಸಮವಾಗಿ ಉಲ್ಲಂಘಿಸುವುದು ಪಾರತಂತ್ರ್ಯದ ಸಾಮಾನ್ಯ ನಿಯಮವಾಗಿದೆ. ಇದು ಸಂಸಾರದಲ್ಲಿರುವ ಜೀವನನ್ನು ನಿರ್ಬಂಧಿಸಿದೆ. ಆದರೆ ಸಾಧಕನು ನಿರ್ಬಂಧನದಿಂದ ನಿವೃತ್ತಿ ಹೊಂದಲು ಇಚ್ಛಿಸುತ್ತಾನೆ.

ಪ್ರಪತ್ತಿಯ ತತ್ತ್ವವನ್ನು ಅನುಸರಿಸಬೇಕಾದುದು ದುಡೇ ಮುಂದಿನ ಮುಖ್ಯ ಅಂಶ. 'ಈಶ್ವರನೊಬ್ಬನೆ ಸ್ವತಂತ್ರನು, ಚೇತನಾಚೇತನಗಳೆಲ್ಲವೂ ಜಗದೀಶ್ವರನನ್ನೇ ಆಶ್ರಯಿಸಿವೆ' ಎಂಬುದೊಂದೆ ಪ್ರಪತ್ತಿಯ ನಿಲುವು. ಇದು ಜೀವನಿಗೆ ಸಂಬಂಧಿಸಿದ ನಂಬಿಕೆ ಮತ್ತು ಜ್ಞಾನ. ಈ ಜ್ಞಾನವನ್ನು ಶಾಶ್ವತವಾಗಿ ಮನಸ್ಸಿನಲ್ಲಿಡಬೇಕು. ಹಾಗೂ ಬದಲಾವಣೆಗಳಿಗೆ ಅವಕಾಶವಾಗುವ ಶಕ್ತಿಗಳನ್ನು ತಡೆಯಲು ಪ್ರಯತ್ನಿಸಬೇಕು. ಚೇತನನು ಸ್ವತಂತ್ರನಲ್ಲವಾದರಿಂದ ತಡೆಯಲು ಅಶಕ್ತನಾಗಿದ್ದಾನೆ.

ಚೇತನನಿಗೆ 'ತನ್ನನ್ನು ಏಕಪ್ರಕಾರವಾಗಿ ಪ್ರವರ್ತಕನನ್ನಾಗಿಸುವ ಜ್ಞಾನದ ಮೇಲೆ ತನಗೆ ಹತೋಟಿ ಇಲ್ಲ' ಎಂಬುದು ಸ್ಪಷ್ಟವಾದ ಸೂಚನೆಯಾಗಿದೆ. ಅದುದರಿಂದ ಸಾಧಕನು ಪ್ರಪತ್ತಿಯ ಭಾವನೆಯನ್ನು ಸಹ ಮನಸ್ಸಿನಲ್ಲಿಡಲು ಯೋಗ್ಯನಲ್ಲ. (ಪ್ರಪತ್ತು ಮನಲಂ) ಚೇತನನು ಕ್ರಮ ತಪ್ಪಿನುಗಳೆಲ್ಲಾ ನಿರ್ಭಯದಿಂದ ತನ್ನ ಒಬ್ಬನೇ ರಕ್ಷಕನಾದ ಶ್ರೀಹರಿಯ ಸನ್ಮುಖದಲ್ಲಿ ಈ ಭಾವನೆಯನ್ನು ಪ್ರಕಟಪಡಿಸುತ್ತಾನೆ. ಆಶ್ರಿತನು ದುಃಖತಪ್ತನಾಗಿ (ಸೀದಾಮಿ ಪುಃಖಾಕುಲಃ) ನಿರ್ದೇಶಿಸಿರುವ ಸ್ವಪ್ರವೃತ್ತಿಮಾರ್ಗ ಮತ್ತು ಸ್ವನಿವೃತ್ತಿಮಾರ್ಗ–ಎರಡು ವಿಧವಾದ ಮಾರ್ಗಗಳನ್ನು ಅನುಸರಿಸಲು ಸಾಮರ್ಥ್ಯವನ್ನು ಈಶ್ವರನ ಮುಂದೆ ವ್ಯಕ್ತಪಡಿಸುವನು.

ಶರಣಾರ್ಥಿಗೆ ತನ್ನ ನಿರ್ಧಾರದಲ್ಲಿಯೇ ಅಪನಂಬಿಕೆ ಮತ್ತು ನಿಯಮಿಸಿರುವ ಎರಡುಮಾರ್ಗಗಳಲ್ಲಿ ಯಾವುದೊಂದನ್ನೂ ಅನುಸರಿಸುವ ಸಾಮರ್ಥ್ಯದಲ್ಲಿ ಅಪನಂಬಿಕೆ ಹೊಂದಿ, ಏತತ್‌ಜ್ಞಾನದ ಸ್ವಾಧೀನದಲ್ಲಿರುವವನು. ಕರ್ತವ್ಯಕ್ಕಾಗಿ ಕರೆಬಂದಾಗ ಅಸಾಮರ್ಥ್ಯವನ್ನು ಹೇಳುವ ಅಪರಾಧಕ್ಕೆ, ಒಪ್ಪಿಸಿಕೊಳ್ಳಲಾಗದ ಶಿಕ್ಷೆಗಳಿಗೆ, ಅವಕಾಶವಾಗುತ್ತದೆ. ಪಾಪಕ್ಕೆ ವೇದನೆಯೇ ಚಿಕಿತ್ಸೆ. ಜೀವಾತ್ಮನ ರಕ್ಷಣೆಯನ್ನು ನೀಡುವ ಆ ಈಶ್ವರನ ಸೇವೆ ಮಾಡಲು ಯಾವಾಗಲೂ, ಪ್ರತಿಯೊಂದು ವಿಧದಲ್ಲೂ ತಪ್ಪುವುದಿಲ್ಲ ಎಂಬ ಸಾಧಕನ ಪ್ರತಿಜ್ಞೆಯನ್ನು ಸಮ್ಮತಿಸಿ, ಬಂಧುತ್ವದ ವಿವೇಚನೆಯಿಂದ ಭಗವಂತನು ಜೀವನಿಗೆ ವಿನಾಯಿತಿ ತೋರಿಸಿ ಚರಮಶ್ಲೋಕದಲ್ಲಿ ತಿಳಿಸಿರುವ ರೀತಿ ಭರವಸೆ ನೀಡಿ, ಶಿಕ್ಷೆಯಿಂದ ಮನ್ನಿಸುವನು. (ಏತಜ್ಜ್ಞಾನಂ ಉಪೇಯುಷೋ ಮಮ ಪುನಃ ಸರ್ವಾಪರಾಧ ಕ್ಷಮಂ ಕರ್ತಾಸೀತಿ). ಜ್ಞಾಪಕ, ಸ್ಥಿರಬುದ್ಧಿ ಅಥವಾ ಅನುಷ್ಠಾನ ಇವುಗಳಲ್ಲಿ ಅಶಕ್ತನಾದ ಜೀವನು ಪರಮಾತ್ಮನ ದೃಢವಾದ ಭರವಸೆಯಿಂದ ನಿಶ್ಚಲನಾಗಿರುತ್ತಾನೆ (ದೃಢೋಽಸ್ಮಿ).

'ಅಕಾರಾರ್ಥೇ ಸಾರಥ್ಯಂ' - ನಾರಾಯಣ ಎಂಬ ಅರ್ಥ ಉಳ್ಳದ್ದು, 'ಸಾರಥೇಃ' ಎಂಬ ಪದ. ಇದೇ ಉಪಾಯ. ಆಶ್ರಿತನು ಕೈಂಕರ್ಯನಿರತನಾಗತಕ್ಕದ್ದೇ ಸೂಕ್ತಮಾರ್ಗ. ಪರಮಾತ್ಮನು ತನ್ನ ಅಂತರಂಗಕ್ಕೆ ಸ್ವೀಕರಿಸದಿದ್ದರೆ, ಸಂಸಾರದಲ್ಲಿ ತೊಡಗಿಸುವನು ಅಥವಾ ಕೈವಲ್ಯ ಪದವಿಗೆ ಅರ್ಹನನ್ನಾಗಿಸುವನು.

ಸಾರಾಂಶ :– ತಿರುಮಷ್ಟಾಕ್ಷರ, ದ್ವಯ, ಚರಮಶ್ಲೋಕ ಇವು ಮೂರೂ ರಹಸ್ಯತ್ರಯಗಳು.

ರಹಸ್ಯತ್ರಯವನ್ನು 'ಅಷ್ಟಶ್ಲೋಕೀ' ಎಂಬ ಎಂಟು ಸಂಸ್ಕೃತ ಶ್ಲೋಕಗಳಲ್ಲಿ ವಿವರಿಸುವವರಲ್ಲಿ ಶ್ರೀ ಪರಾಶರಭಟ್ಟರೇ ಮೊದಲಿಗರು. ರಹಸ್ಯತ್ರಯವು ವೇದಪಾಠದ ಅವಶ್ಯಕವಾದ ಅವಲೋಕನವಾಗಿದೆ.

ಮೊದಲ ನಾಲ್ಕು ಶ್ಲೋಕಗಳು 'ಮಂತ್ರರಾಜ' ಎಂದು ಪ್ರಸಿದ್ಧಿ ಹೊಂದಿ, ಪ್ರಣವ, ನಮಶ್ಶಬ್ದ, ಚತುರ್ಥ್ಯಂತನಾದ ನಾರಾಯಣ ಎಂಬ ಮೂರು ಪದಗಳಿಂದ ಕೂಡಿ ಮೂಲಮಂತ್ರವಾದ 'ತಿರುವಷ್ಟಾಕ್ಷರ'ವನ್ನು ವಿವರಿಸುತ್ತವೆ. 'ಈ ಶ್ಲೋಕಗಳಲ್ಲಿ ಸತ್ಯದ ಸ್ಪಷ್ಟಚಿತ್ರವು ಪ್ರದರ್ಶಿಸಿರುವುದಲ್ಲದೆ' ಚೇತನನ ನಡವಳಿಕೆಗಳನ್ನು ಸೂಚಿಸಿದೆ. ತತ್ತ್ವಜ್ಞಾನದ ವ್ಯವಹಾರಿಕ ಮತ್ತು ತಾತ್ತ್ವಿಕ ಕ್ರಮಗಳನ್ನೂ ಸಹ ತಿಳಿಸಿದೆ.

5 ಮತ್ತು 6ನೇ ಶ್ಲೋಕಗಳೇ ದ್ವಯಮಂತ್ರದ ವಿವರಣೆಯಾಗಿದೆ. ಚೇತನನು ಸದಾಕೈಂಕರ್ಯ ನಿರತನಾಗಿರತಕ್ಕದ್ದು. ಭಗವತ್ಕೈಂಕರ್ಯ ಮತ್ತು ಭಾಗವತಕೈಂಕರ್ಯ ರೂಪವಾಗಿ ತಿಳಿದು ಮಾಡುವ ಎಲ್ಲಾ ಸೇವೆಗಳು ಕೈಂಕರ್ಯವೆನಿಸುತ್ತವೆ. ಭಗವಂತನು ತನ್ನ ಸೇವೆಯಲ್ಲಿ ನಿರತನಾದ ಶರಣಾಗತನನ್ನು ಉದ್ಧಾರಮಾಡುತ್ತಾನೆಂಬುದು ಸರ್ವಸಿದ್ಧ ಎಂಬ ಅಭಿಪ್ರಾಯವು ವ್ಯಕ್ತವಾಗುತ್ತದೆ.

ಕಡೆಯ ಎರಡು ಶ್ಲೋಕಗಳು ಚರಮಶ್ಲೋಕವನ್ನು ಸ್ಪಷ್ಟಪಡಿಸುತ್ತವೆ. ಪರಮೇಶ್ವರನು ಭಕ್ತರನ್ನು ಕಾಪಾಡುವ ಭರವಸೆ ಮತ್ತು ಚೇತನನು ವ್ಯಸನಪಡಬೇಕಾದ ಅವಶ್ಯಕವಿಲ್ಲವೆಂಬ ಆಶ್ವಾಸನೆಯಿಂದ ಕೂಡಿದ್ದಾಗಿದೆ.

ಅಷ್ಟಶ್ಲೋಕಿಯು ಶಾಂತಿ ಮತ್ತು ಹಿರಿಯ ಜ್ಞಾನದ ಕಡೆಗೆ ನಮ್ಮನ್ನು ಸೆಳೆಯುವುದಲ್ಲದೆ, ಈ ಪ್ರಾಪಂಚಿಕ ಸಂಸಾರದಲ್ಲಿ ಬೆಂದು ಬೇಸತ್ತು ನಿರಾಸಕ್ತನಾಗಿ ತಿಳುವಳಿಕೆ ಸಾಲದ ಮೋಕ್ಷಾರ್ಥಿಗೆ, ಅದ್ವಿತೀಯ ಬೃಹತ್ ಶಕ್ತಿಗೆ ಸಂಬಂಧಿಸಿದ ಕೈಂಕರ್ಯದ ಕಡೆಗೆ ಪ್ರವೃತ್ತನನ್ನಾಗಿಸಲು ಮಾರ್ಗದರ್ಶಕವಾಗಿದೆ. ಸಹಜವಾಗಿ ಪರತಂತ್ರ ಜೀವಿಯಾದ ಚೇತನನು ತನ್ನದೇ ಹೊಣೆಗಾರಿಕೆಯಾದ ಆಶ್ರಯಣಪಾತ್ರವನ್ನು ಎಲ್ಲಾ ಸಂದರ್ಭಗಳಲ್ಲಿಯೂ ತಪ್ಪಿಸಿಕೊಳ್ಳಲು ಸಾಧ್ಯವೇ ಇಲ್ಲ. ಸ್ವಾತಂತ್ರ್ಯವೇ ಇಲ್ಲದ ಚೇತನನು, ಜ್ಞಾನಯುಕ್ತವಸ್ತುವಾಗಿ ಸೇವಾಸ್ವೀಕಾರಕ್ಕೆ ಮಾತ್ರ ಅಧಿಕಾರಿಯಾಗಬಲ್ಲನು. ಈ ಚಟುವಟಿಕೆಯೇ 'ಕೈಂಕರ್ಯ', ಎಂಬುದು. ಇದು 'ಕರ್ಮ' ಎಂಬುದಕ್ಕಿಂತ ಬೇರೆಯಾದುದು. ಕರ್ಮವು ಚೇತನನ ಸ್ವಾರ್ಥಕ್ಕಾಗಿ ಮಾಡುವ ಕೆಲಸ. ಆದ್ದರಿಂದ ಎಲ್ಲಾ ಕರ್ಮಗಳನ್ನೂ ಭಗವದಾರಾಧನಾರೂಪನಾಗಿ ತಿಳಿದು ಸರ್ವಂ ಬ್ರಹ್ಮಾತ್ಮಕವೆಂದು ಭಾವಿಸಬೇಕು. ಈ ಮನೋವೃತ್ತಿಯು ಸಮರ್ಥಿಸಲ್ಪಟ್ಟು, ಅಂಗೀಕರಿಸಲ್ಪಟ್ಟರೆ, ಅನಿಷ್ಟ ವಿಪತ್ತುಗಳು ನಾಶವಾಗುತ್ತವೆ. ಜೀವನದಲ್ಲಿ ಆಸೆಯಿಂದ ಕೂಡಿದ ಸೇವಾಭಾವನೆಯ ಅವಕಾಶದ ಭರವಸೆಯು ಪರಮಾತ್ಮನ ಆಶ್ರಿತರಿಗೆಲ್ಲರಿಗೂ ದೊರಕುತ್ತದೆ. ಇಂತಹ ಅನುಭವವನ್ನು ಹೊಂದಿದ ಜನರಿಂದ ಕೂಡಿದ ಪ್ರಪಂಚವು ಸುಖಶಾಂತಿಯಿಂದ ಇರಲು ಸಾಧ್ಯವಾಗುತ್ತದೆ.

ತನಿಯನ್ ಶ್ಲೋಕದಲ್ಲಿ "ಶ್ರೇಯಸೇ ಮೇ ಅಸ್ತು ಭೂಯಸೇ" ಎಂದು ಹೇಳಿದೆ.

'ಶ್ರೇಯಸೇ' ಎಂಬುದು ಸಂಸಾರದಿಂದ ಮುಕ್ತಿಗೆ ಒಯ್ಯತಕ್ಕ ಗುಣ. 'ಭೂಯಸೇ' ಎಂಬುದು ಮುಕ್ತಿಲೋಕದಲ್ಲಿ ಕೈಂಕರ್ಯನಿರತನನ್ನಾಗಿಸುವುದು. ಆದುದರಿಂದ ಶ್ರೀ ಪರಾಶರಭಟ್ಟರವರಂತಹ ಪುಣ್ಯಜೀವಿಗಳ ಸ್ತೋತ್ರಗಳನ್ನು ಅವಲಂಬಿಸಿದರೆ, ಅವುಗಳ ಮೂಲಕ ಅವರು, ಜಡವಸ್ತುವಿನಿಂದ ಕೂಡಿದ ಪ್ರಕೃತಿಗೆ ಬದ್ಧನಾಗಿರುವ ಚೇತನನನ್ನು; ಸಂಸಾರದಿಂದ ತನಗೆ ಮಾತ್ರ ತೃಪ್ತಿಕೊಡಬಲ್ಲ ಮುಕ್ತಿಲೋಕಕ್ಕೂ; ಮತ್ತು ಯುಕ್ತಿಯೇ ಭಾಗವತರ ಮತ್ತು ಭಗವಂತನ ಸೇವಾಕೈಂಕರ್ಯದ ಭಾಗ್ಯ, ಇಂತಹ ಸದವಕಾಶದ ಅಂತಸ್ಥಿಗೆ ಒಯ್ಯುತ್ತದೆ. ಭುಕ್ತಿ, ಮುಕ್ತಿ ಮತ್ತು ಯುಕ್ತಿ—ಇವು ಮೂರೂ ಮುಖ್ಯವಾದ ಸೋಪಾನಗಳು. ಇವೇ ಅಷ್ಟಶ್ಲೋಕಿಯ ಸಾರಾಂಶವಾಗಿದೆ.

ಅಷ್ಟಶ್ಲೋಕಿಯು ಎಂಟು ದಿವ್ಯರತ್ನಗಳಿಂದ ಕೂಡಿದ ಆಭರಣದಂತೆ ಚೇತನನ ಆತ್ಮೋನ್ನತಿಗೆ ಕಾರಣವಾದ ಸ್ತೋತ್ರವಾಗಿದೆ. ಅಲ್ಪಕಾಲದಲ್ಲಿ ಪಠಿಸಬಹುದಾದ ಎಂಟುಶ್ಲೋಕಗಳಲ್ಲಿ ಮೂಲಮಂತ್ರವು ಪರಮಾತ್ಮನ ಮತ್ತು ಜೀವನ ಶೇಷಶೇಷಿ ಭಾವಾದಿಗಳನ್ನೂ, ದ್ವಯವು ಸಿದ್ಧೋಪಾಯದಿಂದ ಕೂಡಿದ ಪ್ರಪತ್ತಿಧರ್ಮವನ್ನೂ, ಚರಮಶ್ಲೋಕವು "ಎಲ್ಲಾಕರ್ಮಗಳನ್ನೂ ಬಿಟ್ಟುನನ್ನನ್ನೇ ಶರಣುಹೊಂದು, ಚೇತನನನ್ನು ಪಾಪಗಳಿಂದ ಬಿಡುಗಡೆಮಾಡಿ ಮುಕ್ತಿಕೊಡುವೆನು, ದುಃಖಿಸಬೇಡ", ಎಂಬ ಭರವಸೆಯನ್ನು ತಿಳಿಸುವುದು.

## ಯುವವಾಣಿ

# ಅಂಬಿಗ ನಾ ನಿನ್ನ ನಂಬಿದೆ

ಹರಿದಾಸ ಸಾಹಿತ್ಯದಲ್ಲಿ ಪ್ರಧಾನ ಪುರುಷರಾಗಿ, ಅಸದೃಶ ಸಾಹಿತ್ಯನಿರ್ಮಾತರೆನಿಸಿ "ಕರ್ನಾಟಕ ಸಂಗೀತ ಪಿತಾಮಹ"ರೆಂದು ಪ್ರಸಿದ್ಧಿ ಪಡೆದವರು ಶ್ರೀಪುರಂದರ ದಾಸರು. ಇವರು ಹೆಸರು ದಾಸಸಾಹಿತ್ಯದ ಜೊತೆಗೆ ಒಂದಾಗಿ ಇಂದಿಗೂ ಅಮರವಾಗಿದೆ. ಇವರ ಕೃತಿಗಳು "ಪುರಂದರೋಪನಿಷತ್ತು"ಗಳೆಂದು ಕರೆಯಲ್ಪಟ್ಟಿವೆ. ಇವರು ತಮ್ಮ ಒಂದೊಂದು ಕೀರ್ತನೆಯಲ್ಲಿಯೂ ಅತಿ ಮಹತ್ತರವಾದ ಲೋಕನೀತಿಯನ್ನು ಅಡಕಮಾಡಿದ್ದಾರೆ. ಆ ಸರ್ವತಂತ್ರ ಸ್ವತಂತ್ರನಾದ ಸರ್ವೋತ್ತಮನಾದ ಪರಮಾತ್ಮನನ್ನು ದಾಸರು ಅಂಬಿಗನ ರೂಪದಲ್ಲಿ, ಆನೆಯ ರೂಪದಲ್ಲಿ, ದಾಸಯ್ಯನ ರೂಪದಲ್ಲಿ ಕಂಡು ಮನಸಾರೆ ಸ್ತುತಿಸಿ ಕೊಂಡಾಡಿದ್ದಾರೆ.

ಪುರಂದರದಾಸರ ಶೈಲಿ ಅತ್ಯಂತ ಸರಳವಾದುದು. ಭಾವವು ಬಹಳ ಚೇತೋಹಾರಿಯಾಗಿದೆ. ಪ್ರಸ್ತುತ "ಅಂಬಿಗ ನಾ ನಿನ್ನ ನಂಬಿದೆ" ಎಂಬ ಪದ್ಯದಲ್ಲಿ ಅಡಕವಾಗಿರುವ ಲೊಕನೀತಿಯ ಒಂದು ಇಣುಕು ನೋಟ ಇಲ್ಲಿದೆ.

ಮೊದಲನೆಯದಾಗಿ "ಅಂಬಿಗ ನಾ ನಿನ್ನ ನಂಬಿದೆ" ಎಂಬ ನುಡಿಯಲ್ಲಿ ಸಮುದ್ರವನ್ನು ದಾಟುವುದಕ್ಕೆ ಅಂಬಿಗನನ್ನು ನಂಬುವ ಅವಶ್ಯಕತೆ ಇರುವಂತೆ ಈ ಸಂಸಾರವೆಂಬ ಸಾಗರವನ್ನು ದಾಟಲು ಆ ಪರಮಾತ್ಮನನ್ನು ಅನನ್ಯವಾಗಿ ನಂಬಿರಬೇಕು ಎನ್ನುತ್ತಾರೆ. ಕಾರಣವೆಂದರೆ ಶ್ರೀಕೃಷ್ಣನು ಶ್ರೀಮತ್ ಭಗವದ್ಗೀತೆಯಲ್ಲಿ 'ತೇಷಾ ಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್' ಎಂಬುದಾಗಿ ಹೇಳಿದ್ದಾನೆ. ಅಂದರೆ ಆ ಪರಮಾತ್ಮನೇ ಈ ಜನನಮರಣರೂಪವಾದ ಸಂಸಾರ ಸಾಗರವನ್ನು ದಾಟಿಸುವ 'ಅಂಬಿಗ'ನಾಗಿದ್ದಾನೆಂಬುದು ಖಚಿತವಾಗುತ್ತದೆ.

ಅಂತೆಯೇ ವ್ಯಾಸರಾಯರು 'ನಂಬಿ ಕೆಟ್ಟವರಿಲ್ಲವೋ ರಂಗಯ್ಯನ, ನಂಬದೇ ಕೆಟ್ಟರೆ ಕೆಡಲಿ' ಎಂದಿದ್ದಾರೆ.

ಇನ್ನು 'ಜಗದಂಬಾರಮಣ ನಿನ್ನ ನಂಬಿದೆ' ಎನ್ನುವಲ್ಲಿ ಈ ಕೆಳಗೆ ವಿವರಿಸಿರುವ ಭಾವವು ಅಡಕವಾಗಿದೆ.

ಪರಮಾತ್ಮನೊಬ್ಬನನ್ನೇ ಪೂಜಿಸಿದರೆ ಅವನು ಅದನ್ನು ಸ್ವೀಕರಿಸುವದಿಲ್ಲ. ಅದು ಲಕ್ಷ್ಮೀದೇವಿಯ ಸಹಿತವಾಗಿದ್ದರೆ ಮಾತ್ರ ಸ್ವೀಕರಿಸುತ್ತಾನೆ. ಅಲ್ಲದೇ ಹರಿ ಕೃಷ್ಣ ಎಂದು ಮುಂತಾಗಿ ಸ್ಮರಿಸುವುದರ ಬದಲು ಶ್ರೀಹರಿ, ಶ್ರೀಕೃಷ್ಣ ಎಂದೇ ಸ್ಮರಿಸುವುದು ಸರಿಯಾದದ್ದು ಎನ್ನುತ್ತಾರೆ ದಾಸರು.

ಇಲ್ಲಿ ಜಗತ್ತಿಗೆ ತಾಯಿಯಾದ ಲಕ್ಷ್ಮೀದೇವಿಗೆ ರಮಣನಾದಂಥ ಪರಮಾತ್ಮನೇ ನಿನ್ನನ್ನು ನಂಬಿದ್ದೇನೆ ಎನ್ನುತ್ತಾರೆ ಮತ್ತು

ಸದೋತ್ತಮಃ ಕಿಂತು ಯದಾ ತು
ಸಾ ಮೇ ವಾಮಾರ್ಧರೂಪೀ
ದಕ್ಷಿಣಾ ನಾಮಧೇಯಾ
(ಶ್ರೀ ಮ. ಭಾ. ತಾ. ನಿರ್ಣಯ)

ಎಂಬಂತೆ – ಲಕ್ಷ್ಮೀದೇವಿಯು ನಿತ್ಯಾವಿಯೋಗಿನಿಯಾಗಿರುವುದರಿಂದ ಹಾಗೂ ಪರಮಾತ್ಮನ ಎಡಭಾಗದಲ್ಲಿ ಸರ್ವದಾ ವಾಸಿಸುವುದರಿಂದ ಅವಳು 'ದಕ್ಷಿಣೆ' ಎಂದು ಹೆಸರು ಪಡೆದಿದ್ದಾಳೆ. ಕಾರಣ ಅವಳ ಸಹಿತನಾದ ಪರಮಾತ್ಮನನ್ನು ಪೂಜಿಸುವುದು ಅವಶ್ಯವೆಂಬುದನ್ನು ಇಲ್ಲಿ ತಿಳಿಸಿ ಕೊಟ್ಟಿದ್ದಾರೆ.

ತುಂಬಿದ ಹರಿಗೋಲಂಬಿಗ
ಅದಕೊಂಬತ್ತು ಛಿದ್ರವು ಅಂಬಿಗ।
ಸಂಭ್ರಮದಿಂ ನೋಡಂಬಿಗ
ಅದರಿಂಬು ನೋಡಿ ನಡೆಸಂಬಿಗ॥

ಇಲ್ಲಿ ಜೀವನ ಶರೀರದ ವರ್ಣನೆಯನ್ನು ಮಾಡುತ್ತ ನಿನ್ನ ಅಧೀನನಾದ ಈ ಜೀವನನ್ನು ಪಾರು ಮಾಡು ಎನ್ನುತ್ತಾರೆ.

ಈ ಮನುಷ್ಯ ಶರೀರವು ಪೃಥ್ವಿ, ಅಪ್, ತೇಜ, ವಾಯು, ಆಕಾಶಗಳೆಂಬ ಪದಾರ್ಥಗಳಿಂದ ಕೂಡಿದ ಪಂಚ ಭೌತಿಕ ಶರೀರವಾಗಿದೆ. ಅಸ್ಥಿ, ಮಜ್ಜಾ, ಮಾಂಸಗಳಿಂದ ತುಂಬಿ ಹೋಗಿದೆ. "ಶರೀರಂ ಚ ನವಚ್ಛಿದ್ರಂ"




ಶ್ರೀನಿವಾಸಮಠದ

ಎಂಬಂತೆ – ಈ ದೇಹವು ನವಮುಖ್ಯ ದ್ವಾರಗಳಿಂದ ಕೂಡಿದೆ.

ಜೀವನದಲ್ಲಿ ಪ್ರತಿಯೊಬ್ಬರೂ ಸರ್ವದಾ ಸುಖವನ್ನೇ ಬಯಸುತ್ತಾರೆ "ಸುಖಮೇವ ಮೇ ಸ್ಯಾತ್ ದುಃಖಂ ಮನಾಗಪಿ ಮಾ ಭೂತ್" ಎಂಬ ಉಕ್ತಿಯಂತೆ ದುಃಖ ರಹಿತವಾದ ಸುಖವನ್ನು ಹೊಂದಬಯಸುವದೇ ಒಂದು ಸಂಭ್ರಮವಾಗಿದೆ, ಈ ಸೊಗಸಿಗೆ, ಸೌಕರ್ಯಕ್ಕೆ ಚ್ಯುತಿಬಾರದಿರಲಿ ಎಂದು ಸರ್ವರೂ ಪ್ರಯತ್ನ ಪಡುತ್ತಾರೆ. ಈ ಕಾರ್ಯವನ್ನು ಪರಮಾತ್ಮನೇ ನಡೆಸಿ ಕೊಡಲು ಸಾಧ್ಯ–ಎಂದಾಗಿ ಹೇಳುತ್ತಾರೆ.

ಹೊಳೆಯ ಭರವ ನೋಡಂಬಿಗ!
ಅದಕೆ ಸೆಳವು ಘನವಯ್ಯ ಅಂಬಿಗ ||

–ಎನ್ನುವಲ್ಲಿ ಈ ಸಂಸಾರಸಾಗರದ ವೇಗವು ಬಹು ಅಚಿಂತ್ಯವಾದದ್ದು. ಎಂಬುದಾಗಿ ತಿಳಿಸುತ್ತಾರೆ. ವೇಗವು ಹೆಚ್ಚಾದಂತೆ ಸೆಳವು ಕೂಡ ಹೆಚ್ಚಾಗುವದು ಸಹಜವೇ. ಈ ಜೀವನದಲ್ಲಿ ಪ್ರತಿಯೊಬ್ಬ ಜೀವಿಯು ತನ್ನದೇ ಆದ ವಿಚಾರ ಧಾರೆಯಲ್ಲಿ ಮುನ್ನಡೆಯುತ್ತಾನೆ. ಅವನ ಸಕಲ ಇಂದ್ರಿಯಗಳೂ ಈ ವಿಚಾರ ಧಾರೆಯಂತೆ ಕೆಲಸಮಾಡುತ್ತದೆ. ಕಾರಣ

ಇಂದ್ರಿಯಾಣಾಂ ಹಿ ಚರತಾಂ
ಯನ್ಮನೋ ಽನುವಿಧೀಯತೇ |
ತದಸ್ಯ ಹರತಿ ಪ್ರಜ್ಞಾಂ
ವಾಯು ರ್ನಾವ ಮಿವಾಂಭಸಿ || (ಗೀತೆ)

ಎಂಬಂತೆ, ಹರಿದಾಡುವ ಇಂದ್ರಿಯಗಳ ಬೆನ್ನು ಹತ್ತಿದ ಅವನ ಬುದ್ಧಿಯನ್ನು ಗಾಳಿಯು ನೀರಿನಲ್ಲಿ ನಾವೆಯನ್ನು ಎಳೆದೊಯ್ಯುವಂತೆ ಎಳೆದೊಯ್ಯುವದು ನಿಶ್ಚಿತ.

ಸುಳಿಯೊಳು ಮುಳುಗಿದೆ ಅಂಬಿಗ ಎನ್ನ |
ಸೆಳೆದು ಕೊಂಡಯ್ಯೋ ನೀ ನಂಬಿಗ ||

– ಈ ಜೀವನದ ಸುಳಿಯಲ್ಲಿ ಮನುಷ್ಯನು ಸಿಕ್ಕು ಕುಟುಂಬ ಪೋಷಣೆಯಲ್ಲಿ ಮಗ್ನನಾಗಿ ಹೋತ್ತಾನೆ, ಅಗ

ಕುಟುಂಬ ಪೋಷಾಯ ಚ ಯನ್ನಿ
ಜಾಯುರ್ನ ಬುಧ್ಯತೇಽರ್ಥವಿಹತಂ
ಪ್ರಮತ್ತಃ |
ಸರ್ವತ್ರ ತಾಪತ್ರಯ ದುಃಖಿತಾತ್ಮಾ
ನಿರ್ವಿದ್ಯತೇ ನ ಸ್ವಕುಟುಂಬರಾಮಃ ||

ಎಂಬ ಭಾಗವತ ವಾಕ್ಯದಂತೆ ಮನುಷ್ಯನು ಕುಟುಂಬ ಪೋಷಣೆಯಲ್ಲಿ ಮಗ್ನನಾಗಿ, ಕುಟುಂಬ ಪೋಷಣೆಗಾಗಿ ದ್ರವ್ಯಾದಿಗಳ ಸಂಪಾದನೆಯಲ್ಲಿಯೇ ತನ್ನ ಆಯುಸ್ಸನ್ನು ವ್ಯಯಮಾಡಿ ಪ್ರಮತ್ತನಾಗುವನು. ಸರ್ವದಾ ಆದಿದೈವಿಕ, ಆಧಿಭೌತಿಕ, ಮತ್ತು ಅಧ್ಯಾತ್ಮಿಕ ಎಂಬ ತಾಪತ್ರಯಗಳಿಂದ ದುಃಖಿತ ಮನಸ್ಸುಳ್ಳವನಾಗಿರುವನು. ವೈರಾಗ್ಯವನ್ನು ಹೊಂದದೇ ಈ ಕುಟುಂಬ ಪೋಷಣೆಯ ಸುಳಿಯಲ್ಲಿ ಮುಳುಗಿದ ಇಂಥವನನ್ನು ಸೆಳೆದುಕೊಂಡು ವೈರಾಗ್ಯ ಮಾರ್ಗದತ್ತ ನಡೆಸಬೇಕಯ್ಯ – ಅಂಬಿಗನೇ ಎನ್ನುತ್ತಾರೆ ದಾಸರು.

ಆರು ತೆರೆಯನೋಡಂಬಿಗ | ಅದು
ಮೀರಿ ಬರುತಲಿದೆ ಅಂಬಿಗ ||

ಈನುಡಿಯಲ್ಲಿ ಜೀವನಿಗೆ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳೆಂಬ ಅರಿಷಡ್ವರ್ಗಗಳು ಆರು ತೆರೆಗಳಾಗಿ ಜೀವನದ ಪ್ರತಿಯೊಂದು ಹಂತದಲ್ಲ ತಮ್ಮದೇ ಆದ ಸ್ವಾಯತ್ತತೆಯನ್ನು ಸ್ಥಾಪಿಸಿ ಜೀವನನ್ನು ಬಂಧಿಸುತ್ತವೆ. ಅಲ್ಲದೆ ಮನುಷ್ಯನ ಪ್ರಯತ್ನವನ್ನು ದಾಟಿ ಅವನನ್ನು ದುಃಖಪಡಿಸಲು ಯತ್ನಿಸುತ್ತವೆ. ಕಾರಣ;

ಶಕ್ನೋತೀಹೈವ ಯಃ ಸೋಢುಂ
ಪ್ರಾಕ್ ಶರೀರ ವಿಮೋಕ್ಷಣಾತ್ |
ಕಾಮಕ್ರೋಧೋದ್ಭವಂ ವೇಗಂ
ಸ ಯುಕ್ತಃ ಸ ಸುಖೀ ನರಃ || (ಗೀತೆ)

ಎಂಬಂತೆ ಈ ಕಾಮಕ್ರೋಧಗಳ ವೇಗವನ್ನು ಸಹಿಸಲು ಸಮರ್ಥನಾದವನು ಸುಖೀ ಪುರುಷನೆನಿಸಿಕೊಳ್ಳುತ್ತಾನೆ. ಕಾರಣ ಇವುಗಳನ್ನು ಹತ್ತಿಕ್ಕಿ ಸಹಿಸಿ ಮೀರಿಬರದಂತೆ ನೋಡಿಕೊಳ್ಳುವುದು ಮನುಷ್ಯನ ಕರ್ತವ್ಯವೆಂದು ಹೇಳುತ್ತಾರೆ.

ಯಾರಿಂದಲಾಗದು ಅಂಬಿಗ | ಅದ ನೀ
ವಾರಿಸಿ ದಾಟಿಸು ಅಂಬಿಗ ||

ಇಲ್ಲಿನ ಯಾವ ಅರಿಷಡ್ವರ್ಗಗಳನ್ನೂ ಜಯಸುವುದು ಮಹಾ ಕಷ್ಟತರವಾದದ್ದು. ಆದ್ದರಿಂದ ಪರಮಾತ್ಮನೇ ಈ ವಿಷಯಗಳಿಂದ ದೂರೀಕರಿಸಿ ಕಾಪಾಡಬೇಕು ಎನ್ನುತ್ತಾರೆ.

ಸತ್ಯವೆಂಬುದೆ ಹುಟ್ಟಂಬಿಗ | ಸದಾ
ಭಕ್ತಿಯೆಂಬುದೆ ಪಥವಂಬಿಗ ||

ಇಲ್ಲಿ 'ನಾಸ್ತಿ ಸತ್ಯಸಮೋ ಧರ್ಮೋ ನ ಸತ್ಯಾದ್ವಿದ್ಯತೇ ಪರಮ್' (ಮಹಾಭಾರತ) ಎಂಬ ಉಕ್ತಿಯಂತೆ ಸತ್ಯಕ್ಕೆ ಸಮಾನವಾದ ಧರ್ಮ ಇಲ್ಲ, ಸತ್ಯಕಿಂತ ಹೆಚ್ಚಿನದು ಯಾವುದೂ ಇಲ್ಲ. ಹಾಗೂ

ಸತ್ಯೇನ ಧಾರ್ಯತೇ ಪೃಥ್ವೀ
ಸತ್ಯೇನ ತಪತೇ ರವಿಃ |
ಸತ್ಯೇನ ವಾಯವೋ ವಾಂತಿ
ಸರ್ವಂ ಸತ್ಯೇ ಪ್ರತಿಷ್ಠಿತಂ ||

ಎನ್ನುವಂತೆ ಈ ಜಗತ್ತಿನಲ್ಲಿ ಎಲ್ಲವೂ ಸತ್ಯದಿಂದಲೇ ನಡೆಯುತ್ತದೆ. ಸತ್ಯವೇ ಎಲ್ಲಕ್ಕೂ ಮೂಲಭೂತವಾದದ್ದು ಮತ್ತು 'ಅಮಲಾ ಭಕ್ತಿಶ್ಚ ತತ್ಸಾಧನಂ' ಎಂಬಂತೆ ನಿರ್ಮಲ ಭಕ್ತಿಯೇ ಮುಕ್ತಿಮಂದಿರದ ಸೋಪಾನವೆನಿಸಿದೆ. ಕಾರಣವೆಂದರೆ 'ಭಕ್ತ್ಯಾತ್ವನನ್ಯಯಾ ಶಕ್ಯ ಅಹಮೇವಂ ವಿಧೋಽರ್ಜುನ' ಎಂದಾಗಿ ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ಹೇಳಿರುವುದರಿಂದ ಭಕ್ತಿಯಿಂದಲೇ ಪರಮಾತ್ಮನು ಹೊಂದಲ್ಪಡತಕ್ಕವನು ಎಂಬುದು ಖಚಿತವಾಗುತ್ತದೆ.

ನಿತ್ಯಮೂರುತಿ ಪುರಂದರ ವಿಠ್ಠಲ |
ನಮ್ಮ
ಮುಕ್ತಿ ಮಂಟಪಕೊಯ್ಯೋ ಅಂಬಿಗ ||

–ಎನ್ನುವಲ್ಲಿ ನಿತ್ಯನಾದ ಪರಮಾತ್ಮನು ನಮಗೆ ಮುಕ್ತಿಯನ್ನ ಕೊಡ ತಕ್ಕವನು ಎಂಬುದನ್ನು ತಿಳಿಸುತ್ತಾರೆ.

ಈಶಮಾಶ್ರಿತ್ಯ ತಿಷ್ಠಂತಿ
ಮುಕ್ತಾಃ ಸಂಸಾರಸಾಗರಾತ್''
(ಶ್ರೀವಿಷ್ಣು ತತ್ತ್ವವಿನಿರ್ಣಯ)

ಹಾಗೂ

ಬಂಧಕೋ ಭವಪಾಶೇನ
ಭವಪಾಶಾಚ್ಚ ಮೋಚಕಃ|
ಕೈವಲ್ಯದಃ ಪರಂಬ್ರಹ್ಮ
ವಿಷ್ಣುರೇವ ನ ಸಂಶಯಃ||

ಇತ್ಯಾದಿ ಪ್ರಮಾಣಗಳಿಂದ ಹಾಗೂ 'ಅಮೃತಸ್ಯೈಷ ಸೇತುಃ'' ಇತ್ಯಾದಿ ಶ್ರುತಿಗಳಿಂದ ಮುಕ್ತಿಯನ್ನು ದಯಪಾಲಿಸುವವನು ಪರಮಾತ್ಮನೇ ಎಂಬುದು ತಿಳಿದು ಬರುತ್ತದೆ.

( 12ನೇ ಪುಟದಿಂದ )

ಪ್ರಜ್ಞಾವಂತ, ಭೀಷ್ಮ, ದ್ರೋಣರು ಮಹಾಭಾರತದ ವಯೋವೃದ್ಧರು. ಜೊತೆಯಲ್ಲಿ ಜ್ಞಾನಿಗಳೂ ಹೌದು. ಇಂಥವರು ಏನೋ ಕರ್ಮದಿಂದ ತಮಗಿಂತಲೂ ಬಹು ಕಿರಿಯರಾದ, ಮಕ್ಕಳ ಮಧ್ಯದಲ್ಲಿ ಸಿಲುಕಿಕೊಂಡು ಬದುಕಬೇಕಾಗುತ್ತದೆ. ತಿಂದ ಉಪ್ಪಿಗೆ ತಪ್ಪಬಾರದೆಂಬ ಸಂಕಟ ಇವರಿಗೆ ಉಂಟಾಗುತ್ತದೆ. ಹೀಗಾಗಿ ಮಹಾ ಪುರಾತನ ವಟವೃಕ್ಷಗಳಂತಿದ್ದ ಈ ಮಹಾಚೇತನಗಳು ಸಣ್ಣ ಸಣ್ಣವರ ಬಿದಿರುಗಿಚ್ಚಿಗೆ ಮೇವುಗಾಡಾದ ಮಹಾದಾರುಣ ಸನ್ನಿವೇಶವನ್ನು ಮಹಾಭಾರತದಲ್ಲಿ ನೋಡುತ್ತೇವೆ. ಆತ್ಮ ಸಂಯಮಕ್ಕೆ ಹೆಸರುವಾಸಿಯಾದ ಭೀಷ್ಮರು ದ್ರೋಣರಗಿಂತ ಜ್ಞಾನವಯೋವೃದ್ಧರೆಂಬುದರಲ್ಲಿ ಸಂಶಯವಿಲ್ಲ. ಈ ಮಹಾನುಭಾವ ಶರಶಯ್ಯೆಗಿದಾಗ ಮಹಾಕವಿ ಒಂದು ಮಾತನ್ನು ಹೇಳುತ್ತಾನೆ.

"ಪಡುವಣ ಶೈಲ ವಿಪುಲ ಸ್ತಂಭ ದೀಪ್ತಿಕೆಯಂತೆ ರವಿ ಮೆರೆದ" ಎಂದು ಮಹಾಪುರುಷನ ಮರಣವನ್ನು ಆಚರಿಸಲು ಪ್ರಕೃತೀ ದೇವಿ ಪಶ್ಚಿಮಾಚಲ ವಿಪುಲ ಸ್ಥಂಭದ ಮೇಲೆ ರವಿ ದೀಪಿಕೆಯನ್ನು ಹೊತ್ತಿಸುತ್ತಾಳೆ. ಜ್ಞಾನಗೋಚರವಾಗುವ ದಿವ್ಯತೆಯನ್ನು ಈ ಮಾತಿನಲ್ಲಿ ಕಂಡಿದ್ದಾನೆ. ಕುಮಾರ ವ್ಯಾಸನು ಕಥೆಯ ದೃಷ್ಟಿಯಿಂದ ವ್ಯಾಸರನ್ನು ಅನುಸರಿಸಿದ್ದರೂ ತನ್ನದೇ ಆದ ಭಾಗವತ ಪ್ರಜ್ಞೆಯ ದಿವ್ಯ ಪ್ರಭಾವದಿಂದ ಈ ವ್ಯಕ್ತಿಗಳನ್ನು ನೋಡಿರುವ ರೀತಿ ವಿಶಿಷ್ಟವಾಗಿದೆ. 'ಸೆಣಸು ಸೇರದ ದೇವನನ್ನು ಕೆಣಕಿ ಬದಕುವ ಸಾಹಸಿಯಾಗಿ, ಸ್ವಾಭಿಮಾನಕ್ಕೆ ಬಗೆಬಗೆಯಾಗಿ ಕಷ್ಟ ತಂದ ಪಾಂಡವರಿಗೆ ಒಂದಂಗುಲ ನೆಲವನ್ನು ಕೊಡುವುದಿಲ್ಲವೆಂಬ ದುರ್ಯೋಧನನು

ಖ್ಯಾತಿ ಕುಂದದು ಮನದ ಧೈರ್ಯದ
ಧಾತು ಕುಂದದು, ಲಜ್ಜೆಯಭಿಮತ
ಜಾತಿ ಗೆಡದು, ಯುಧಿಷ್ಠರಾದ್ಯರಲಿ,
ಕುರುರಾಯನೆಂಬೀ
ಖ್ಯಾತಿಯಲ್ಲದೆ ಬೇರೆ ರಾಜ್ಯವ ನೊಲ್ಲೆನಾನೆಂದ

ತೊಡೆಯೊಡೆದು ಬಿದ್ದಾಗಲೂ ತನ್ನ ಭೂಮಿಯನ್ನು ತನ್ನ ವೈರಿಗಳಿಗೆ ಬಿಟ್ಟು ಕೊಡನೆಂಬ ಛಲ ಸುಯೋಧನನದು. ಕುಮಾರವ್ಯಾಸ ಕಾಣುವುದು ರೂಪಕಗಳನ್ನು, ಮಾತನಾಡುವುದು ರೂಪಕಗಳಲ್ಲಿ,ಅಷ್ಟೆ ಏಕೆ ಅವನ ಸಾಧಾರಣತಮ ಭಾಷೆಯು ರೂಪಕದಿಂದ ದೀಪ್ತಿಗೊಂಡಿರುತ್ತದೆ. ಈ ಭೂಮಿಕೆಯಲ್ಲಿ ಇವನನ್ನು ಸರಿಗಟ್ಟುವ ಕವಿ ಕನ್ನಡದಲ್ಲಿಲ್ಲ. ಅವನನ್ನು ರೂಪಕ ಸಾಮ್ರಾಜ್ಯದ ಚಕ್ರವರ್ತಿ ಎಂದು ಕರೆಯುತ್ತಾರೆ. ಕುಮಾರವ್ಯಾಸನು ನುಡಿಯುವ ಭಾಷೆಯೇ ಭಾವವಾಗುತ್ತದೆ; ಭಾಷೆಯೇ ರೂಪಕವಾಗುತ್ತದೆ.

ಮುಗಿಲ ಜಿನಕಗೆ ಲಡ್ಡುಗೆಗಳಾದವು
ಸಮಸ್ತಗ್ರಹ ಸುತಾರೆಗಳು

ನಿಸರ್ಗವನ್ನೇ ರೂಪಕದಲ್ಲಿ ಹಿಡಿದಿರುವ ಭಾವ ಸಂಪತ್ತಿ ಇಲ್ಲಿದೆ. "ತರಣಿ ತೆಗೆದನು ತಾವರೆಯ ಬಾಗಿಲನ ಬಿಯಗವ" ಎನುವಲ್ಲಿ ಬೆಳಗಾಯಿತು ಎಂಬ ಶಬ್ದವನ್ನು ಈ ರೀತಿ ರೂಪಕದಲ್ಲಿ ವ್ಯಕ್ತಪಡಿಸಿದ ಪ್ರತಿಭೆ ಒಂದೆಡೆಯಾದರೆ, ಬಾಗಿಲಿನ ಬೀಯಗವನ್ನು ತೆಗೆದು, ತರಣಿಯ ಬೆಳಕನ್ನು ಒಳಗಡೆ ಬರಮಾಡಿ ಸೆರೆಯಲ್ಲಿದ್ದ ತುಂಬಿಗಳನ್ನು ಹೊರಬಿಟ್ಟು ತಾವರೆ ಪಡೆದ ಮುಕ್ತ ಮನದ ಸ್ವಾತಂತ್ರ್ಯವನ್ನು ಕೀಚಕನ ಕೊಲೆಗೆ ಬಪ್ಪ ಕಂಕಣನಾದ ಭೀಮವಚನದಿಂದ ದ್ರೌಪದಿ ಪಡೆದಳೆಂಬ ಧ್ವನಿ ರಮ್ಯತೆಯೂ ಸಾಜನೆಬಗಿನಿಂದ ಸೇರಿಕೊಂಡಿದೆ. ಕುಮಾರವ್ಯಾಸನ ಭಾಷಾ ಪದ್ಧತಿಯು ಸ್ವತಂತ್ರವಾದುದು. ಎಲ್ಲಿಯೂ ಅತಂತ್ರವಾಗಿಲ್ಲ.

"ಸಂಧ್ಯಾ ಸಮಯದಲ್ಲಿ ಪಶ್ಚಿಮ ದಿಕ್ಕಿನಲ್ಲಿ ಬಣ್ಣಗಳ ಹರವು ವಿಪರೀತ, ಸಾಗರದ ನೀಲ ವರ್ಣದ ನೀರಿನ ರಾಶಿ ವಿಪರೀತ; ವೈಶಾಖದಲ್ಲಿ ಅರಳಿಯ ಮರಕ್ಕೆ ಹಸಿರು ಎಲೆಗಳ ಸಮೃದ್ಧಿ ವಿಪರೀತ ಹೀಗೆ ನಾರಾಯಪ್ಪನಲ್ಲಿ ವಚನ ವೈಭವ ವಿಪರೀತ". ಪದ ಪ್ರಯೋಗದಲ್ಲಿ ಕುಮಾರವ್ಯಾಸ ನೋಡಿಕಾರ. ಆತನ ಮಾತಿನ ವೈಖರಿಗೆ ಎಂಥವರೂ ಮೂಕ ವಿಸ್ಮಿತರಾಗುವುದು ಸಹಜ. ಪದ ಪದಗಳಿಂದ ಭಾವ ಭಾಗೀರಥಿಯನ್ನು ಸೃಷ್ಟಿಸಿ ನೆಲಕ್ಕೆ ತರುವ ಕಲಾ ಭಗೀರಥನಿವನು. ಕನ್ನಡದ ಶಬ್ದ ಭಂಡಾರವನ್ನು ಶ್ರೀಮಂತಗೊಳಿಸಿದ ಈ ಕವಿ ಸಿಕ್ಕಿದ ಕಡೆಯಿಂದೆಲ್ಲಾ ಪದಗಳನ್ನು, ರೂಪಕಗಳಂತೆ ಸೂರೆಮಾಡಿದ್ದಾನೆ.

ಕುಮಾರವ್ಯಾಸನನ್ನು ಎಷ್ಟೇ ವರ್ಣಿಸಿದರೂ ತೃಪ್ತಿಪಟ್ಟುಕೊಳ್ಳಲಾರ. ಮಾನವ ಜೀವನದ ಹಾಸುಹೊಕ್ಕಾಗಿ ಪ್ರಕೃತಿ ವರ್ಣನೆಯನ್ನು ಆತ ಚೆನ್ನಾಗಿ ಬಳಸಿ ಕೊಂಡಿದ್ದಾನೆ. ಆದರೆ ಹಿಂದಿನ ಕವಿಗಳಂತೆ ಅಂಗೋಪಾಂಗಗಳನ್ನು ವರ್ಣಿಸುವ ಶೃಂಗಾರ ರಸದಲ್ಲಿ ಸ್ವಲ್ಪ ನಿರಾಸಕ್ತ. ದ್ರೌಪದಿಯ ಸ್ವಯಂವರ ಸನ್ನಿವೇಶ; ಅರ್ಜುನನ ಬಳಿಗೆ ಪ್ರಣಯ ಭಿಕ್ಷೆಗೆ ಬಂದ ಊರ್ವಶಿಯ ವರ್ಣನೆ; ಪಾಂಡು ಮರಣ ಪ್ರಸಂಗದಲ್ಲಿ ಮಾದ್ರಿಯನ್ನು ವರ್ಣಿಸುವಾಗ "ಹೂವಿನಲಿ ಸರ್ವಾಂಗ ಶೃಂಗಾರದಲಿ" ಹೂವಿಂದ ತನ್ನನ್ನು ಶೃಂಗರಿಸಿಕೊಂಡ ವಿಳಾಸದಲ್ಲಿ ಆವಳೇನು ಊರ್ವಶಿಯೋ? ರಂಭೆಯೋ? ಎಂದು ಅರಸ ನೋಡಿ ಬೆರಗಾಗಿ, 'ಅರಿವು ಕಟಿ ಜಾನು ಅಂಘ್ರಿ ಮಿತವಾಗಿ', ಕಾಮ ಬಾಣ ತಾಗ ಹಿಂದೆಲ್ಲವನ್ನೂ ಮರೆತು ಸತಿಯ ಹತ್ತಿರ ಹೋಗಿ,

# ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ. ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸ ಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯು ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

ಅವಳು ಬೇಡಬೇಡವೆಂದರೂ, ಚರಣದಲ್ಲೆರಗಿದರೂ ಕಳವಳಿಸಿ ಕೂಡಿದನು. 'ಅಕಟ ಪಾಂಡು ಅರಸ ವಿಷಕನ್ನಿಕೆಯನ್ನು ಮುಟ್ಟಿದೈ' ಎನ್ನುವ ಮಾತನ್ನವಲೋಕಿಸಿದಾಗ ಮನಸ್ಸು ಮಾಡಿದನೆಂದರೆ ಅತ ಎಂಥಹ ತೀವ್ರತೆಯನ್ನು ಉಂಟುಮಾಡಬಲ್ಲನೆಂಬುದು ಕಾಣಬಹುದು. ದ್ರೌಪದಿ ಭಂಗದ ಸಂದರ್ಭವು ಕುಮಾರವ್ಯಾಸ ಭಾರತದ ಉನ್ನತ ಶಿಖರಗಳಲ್ಲಿ ಒಂದು. ಅಸತ್ಯ, ಅನ್ಯಾಯಗಳನ್ನು ಕಂಡು ಕೆರಳಿ ಸಿಡಿದೇಳುವ ಕುಮಾರವ್ಯಾಸನ ವೀರ ವ್ಯಕ್ತಿತ್ವ, ಅದ್ಭುತವಾದ ಸಕಲ ಶಕ್ತಿಯುತವಾದ ಕವಿತ್ವ. ತಾನು ಪುಷ್ಪವತಿಯೆಂದು ದ್ರೌಪದಿ ಹೇಳಿದ್ದಕ್ಕೆ ದುಶ್ಯಾಸನನು,

ನೀ ಪುಷ್ಪವತಿಯಾಗಿಲ್ಲಿ ಫಲವತಿಯಾಗು
ನಡೆ ಕುರುರಾಜ ಭವನದಲಿ

ಎಂದ ಮಾತು ಅಸಭ್ಯವಾದರೂ ಆ ಸಂದರ್ಭದಲ್ಲಿ ಆ ಪಾತ್ರಕ್ಕೆ ತೀರಾ ಯೋಗ್ಯವಾಗುತ್ತದೆ. ಕವಿಯ ಒರಟುತನ ಇಲ್ಲಿ ಸಾರ್ಥಕವಾಗುತ್ತದೆ. ದ್ರೌಪದಿಯ ಹಲುಬನ್ನು ಕೇಳಿ ಭೀಮನು ರೋಷದಿಂದ ಪ್ರತಿಜ್ಞೆ ಮಾಡಿದ ಸಂದರ್ಭವು ರುದ್ರ ಭೀಭತ್ಸಗಳ ಯತಿಯಿಂದ ಉತ್ಕಟತಮವಾಗಿದೆ.

ಸೈರಂಧ್ರಿಯ ವೇಷದಲ್ಲಿದ್ದ ದ್ರೌಪದಿಯು ಕೀಚಕನಿಂದ ಅವಮಾನಿತಳಾಗಿ "ಗಂಡರೈವರು, ಮೂರು ಲೋಕದ ಗಂಡರೊಬ್ಬಳನ್ನು ಆಳಲರಿರಿ, ಗಂಡರೋ ನೀವ್ ಷಂಡರೋ" ಎಂದು ಕಂಬನಿ ದುಂಬಿ ನಿಂದಾಗ ಭೀಮನ ರೋಷದ ಘನತೆಯನ್ನು ಗುರುತಿಸಬಹುದು; "ಹಿಂಡಿದನು ಹಗೆಗಳನ್ನು ಮನದೊಳಗೆ", ಭೀಮನ ರೋಷವನ್ನು ಬಣ್ಣಿಸಲೂ ಇದಕ್ಕಿಂತ ಪ್ರಭಾವಿಯಾದ ಮಾತು ಸಿಗಲಾರದು.

ಇನ್ನು ಹಾಸ್ಯರಸಕ್ಕೆ ಹೊನ್ನ ಕಿರೀಟವನ್ನಿಟ್ಟಂತೆ ಉತ್ತರಕುಮಾರನ ಪೌರುಷ ಅಡಕವಾಗಿದೆ. ಮುನ್ನಾದಿನ ತನ್ನ ಸಾರಥಿ ಸತ್ತು ಹೋಗಿದ್ದು, ತನಗೆ ತಕ್ಕ ಸಾರಥಿ ಸಿಕ್ಕರೆ ಕೌರವ ರಾಜನ ಸೈನ್ಯಕ್ಕೆ ಹಬ್ಬ ಮಾಡುವನೆಂದು ಹೆಮ್ಮೆ ಕೊಚ್ಚಿಕೊಂಡ ಉತ್ತರನಿಗೆ, ನಾಟ್ಯವಿದ್ಯೆಯಲ್ಲಿ ಪರಿಣತನಾದ ತನಗೆ ಯುದ್ಧದಲ್ಲಿ ಅನುಭವವಿಲ್ಲ ಅದಕ್ಕೆ ತಾನಂಜುವೆನೆಂದವನಿಗೆ "ಕೋಳಗುಳದೊಳಗೆ ಸಾರಥಿ ತನವ ಬಲ್ಲನೆ ಅರ್ಜುನ" ಎನ್ನಲೂ 'ತಾನಿರೆ ಭೀತಿ ಬೇಡೆಂದ'–ಸಂಭಾಷಣೆ. ನಿಜವಾದ ಶೂರನಾದ ಅರ್ಜುನನು ಭೀತಿಯ ತೋರಿಕೆಯ ಭಾಷೆಯನ್ನಾಡಿದರೆ ನಿಜವಾದ ಹೇಡಿಯಾದ ಉತ್ತರನು ಶೌರ್ಯತೋರಿಕೆಯ ಮಾತನಾಡುತ್ತಾನೆ. ತಿರುವುಮುರುವಿನ ಚಮತ್ಕೃತಿಯ ಮೂಲಕ ನಗೆ ಕಳೆಗಟ್ಟಿದೆ, ಹಾಸ್ಯ ಕೆನೆಗಟ್ಟಿದೆ.

'ಯುದ್ಧದಲ್ಲಿ ಓಡಿ ಹೋದರೆ ಪಾಪಬರುತ್ತದೆ, ಮುಂದೆ ಹೆಜ್ಜೆ ಇಟ್ಟರೆ ಅಶ್ವಮೇಧ ಫಲಪ್ರಾಪ್ತಿ, ಸತ್ತರೆ ದೇವ ಲೋಕದ ಅಪ್ಸರೆಯರು ದಾಸಿಯರು, ವೀರ ಸ್ವರ್ಗ ದೊರೆಯುವುದು' ಎಂದು ಅರ್ಜುನ ಹೇಳಿದಕ್ಕೆ 'ಯುದ್ಧದಲ್ಲಿ ಓಡಿಹೋದರೆ ಬ್ರಾಹ್ಮಣರು ಪಾಪ ಕಳೆವರು, ಅಶ್ವಮೇಧ ಪ್ರತ್ಯೇಕ ಮಾಡಬಹುದು, ಸುರಸತಿಯರು ಬೇಕಾಗಿಲ್ಲ, ಅರಮನೆಯ ನಾರಿಯರೇ ಸಾಕು, ಅರುಸುತನವೇ ಇಂದ್ರಪದ' ಹೀಗೆ ಸ್ವಭಾವೋಚಿತವಾದ ಉತ್ತರನ ಉತ್ತರವು ಚಿತ್ರಿತವಾಗಿದೆಯಲ್ಲದೆ, ಏನಾದರೊಂದು ನೆಪದಿಂದ ಜಾರಿಕೊಳ್ಳುವ ಚಿರಂತನವಾದ ಮನುಷ್ಯ ಸ್ವಭಾವವನ್ನು ಪ್ರತಿಬಿಂಬಿಸುತ್ತದೆ.

ಕುಮಾರವ್ಯಾಸನ ವರ್ಣಕ ದೃಷ್ಟಿಗೆ ಯುದ್ಧ ವರ್ಣನೆಯೇ ಸಾಕ್ಷಿ. ಅವನ ವೀರರಲ್ಲಿ ಒಬೊಬ್ಬರು ಒಂದೊಂದು ತೆರನಾಗಿದ್ದಾರೆ. ಇಲ್ಲಿ ಕಟಕಿ, ಬಿರುನುಡಿ, ವ್ಯಂಗ ಹಾಸ್ಯ, ಸರಸ, ಪರಿಹಾಸ್ಯ–ಎಲ್ಲವೂ ಅವನ ಬತ್ತಳಿಕೆಯಲ್ಲಿ ಸಿದ್ಧವಾಗಿರುತ್ತವೆ. ಕರುಣ ರಸವನ್ನು ಇವನಿಗಿಂತ ಶಕ್ತಿಯುತವಾಗಿ ಎಷ್ಟು ಜನ ವರ್ಣಿಸ ಬಲ್ಲರು? ಇದಕ್ಕೆ ಅಭಿಮನ್ಯುವಿನ ವೀರ ಮರಣ ಪ್ರಸಂಗ, ಕರ್ಣಾವಸಾನಗಳ ಸನ್ನಿವೇಶಗಳೇ ಸಹಜ ಉದಾರಣೆಗಳಾಗಿವೆ.

ಕುಮಾರವ್ಯಾಸನ ಪಾತ್ರಗಳಲ್ಲಿ ಅದ್ಭುತ ಶಕ್ತಿಯ ಸಂಚಾರವನ್ನು ಕಾಣುತ್ತೇವೆ. ಅವನು ಸೃಷ್ಟಿಸಿದ ಭೀಮ, ದ್ರೌಪದಿ, ಅಭಿಮನ್ಯು, ಉತ್ತರಕುಮಾರ, ಕರ್ಣ, ಅರ್ಜುನ, ಶ್ರೀಕೃಷ್ಣ, ಭೀಷ್ಮ, ವಿದುರ, ದುರ್ಯೋಧನರು ಚೈತನ್ಯಪೂರ್ಣ ಪಾತ್ರಗಳಾಗಿ ನಡೆದಾಡುತ್ತಾರೆ. ಅವನ ಪಾತ್ರಗಳು ತುಂಬು ಜೀವಿಗಳಾಗಿವೆ. ಕುಮಾರವ್ಯಾಸನ ದುರ್ಯೋಧನ ಒಮ್ಮೊಮ್ಮೆ ಸಾಧಾರಣವಾಗಿಯೇ ಕಂಡುಬರುತ್ತಾನೆ. ಕರ್ಣನ ಪಾತ್ರದ ದುರಂತತೆ ಅವನ ಹುಟ್ಟಿನಲ್ಲಿ ಅಡಗಿದೆ. ಎಂಬ ಅಂಶವನ್ನು ಬಹು ಮನೋಜ್ಞವಾಗಿ ಮಹಾ ಭಾರತವೇ ಧ್ವನಿಸಿದೆ. ಕುಂತಿ ಮಾಡಿದ ತಪ್ಪಿಗಾಗಿ ಕರ್ಣನ ಬದುಕು ಉದಾರಧೀರರಮಣೀಯವಾದರೂ ದುಃಖಮಯವಾಯಿತು. ಕುಮಾರವ್ಯಾಸನು ಕರ್ಣ ಶೂರನೂ, ಧೀರನೂ, ದಾನಿಯೂ, ಆಗಿದ್ದಾನೆ. ದುರ್ಯೋಧನನಿಗೆ ಪಾಂಡವರ ಮೇಲಿದ್ದ ಸಹಜ ವೈರಕ್ಕೆ ಪೋಷಿತವಾಗುವಂತಹ ನಾಲ್ಕಾರು ಸನ್ನಿವೇಶಗಳನ್ನು ಕವಿಯು ಬಹು ಸುಂದರವಾಗಿ ಚಿತ್ರಿಸಿದ್ದಾನೆ. ಬಾಲ್ಯದಲ್ಲಿ ಭೀಮನ ಕೋಟಲೆಯಿಂದ ಹೊತ್ತಿಕೊಂಡ ಅಂತರಮುಖಿಯಾದ ವೈರ–ದ್ರೌಪದೀ ಸ್ವಯಂವರದಲ್ಲಿ ಆದ ಪರಾಭವ–ರಾಜಸೂಯಯಾಗದಲ್ಲಾದ ನೂರಾರು ಬಗೆಯ ಅಪಮಾನ– ಇವುಗಳಿಂದ ಕೌರವರ ವೈರ ಪಾಂಡವರ ಮೇಲೆ ಬೆಳೆಯುತ್ತ ಹೋಯಿತು.

ದುರ್ಯೋಧನ ಮಡಿದಾಗ "ರುಧಿರದ ತಿಲಕ ನಾಪನಲ್ಲೆ ಧರಾಂಗನೆಗೆ" ಎಂಬ ಕವಿ ಒಂದು ರೂಪಕವನ್ನು ಹೇಳಿ ಅವನ ಪಾತ್ರವನ್ನು ಉನ್ನತ ಮಟ್ಟಕ್ಕೆ ಒಯ್ಯುತ್ತಾನೆ. ದುರ್ಯೋಧನ–ಕರ್ಣರ ಪ್ರೀತಿ ಮಹಾಭಾರತವನ್ನೆಲ್ಲ ಬಿಗಿದಪ್ಪಿದೆ. ಅವರ ಸ್ನೇಹ ಆದರ್ಶಮಯವಾದುದು. ಕರ್ಣನ ಪ್ರೇಮ ನಿರ್ಮಲವಾದದ್ದು, ಗಾಢವಾದುದು; ಪ್ರಾಣಾರ್ಪಣೆಯನ್ನೂ ಮಾಡಿಸುವಷ್ಟು ಮಹಿಮೆಯುಳ್ಳದ್ದು. ಈ ಸ್ನೇಹ ಭಗವದ್ಭಕ್ತಿಗೆ ಸಮಾನವಾದದ್ದು. ತನ್ನ ಸ್ವಾಮಿ ಹೇಗೆ ವರ್ತಿಸಿದರೂ ಅವನು ತನ್ನ ಸ್ನೇಹ ಧರ್ಮವನ್ನು ಮರೆಯಲಿಲ್ಲ. ಅದೆಷ್ಟು ಬಗೆಯಾಗಿ ತನ್ನ ಸ್ವಾಮಿಗಾಗಿ ಸ್ನೇಹಚೋದಿತನಾಗಿ ಮರುಗಿದನೋ? ಇದನ್ನು ಕುರಿತಾದ ಅವನ ಹೃತ್‌ಸಂವಾದಗಳು, ಕರುಣಾಪೂರ್ಣ ಕಲಶಗಳು. ನಾರಾಯಣಪ್ಪನ ಪ್ರತಿಭೆಯ ಗಂಗೆ ಆ ಅಕ್ಷಯ ಕಲಶವನ್ನು ಸದಾ ತುಂಬುತ್ತಿರುತ್ತವೆ. ಕರ್ಣ ಮಡಿದರೂ ಆ ಕರುಣೆಯ ಕಲಶ ಉಕ್ಕುತ್ತಿರುತ್ತದೆ. ಒಟ್ಟಿನಲ್ಲಿ ಕರ್ಣ–ಸುಯೋಧನರ ಸ್ನೇಹ ಬಂಧನ ಮಹಾಭಾರತವೆಲ್ಲವನ್ನು ವ್ಯಾಪಿಸಿದೆ.

ಕುಮಾರ ವ್ಯಾಸನದು ಭಾಗವತ ದೃಷ್ಟಿಯಾದುದರಿಂದ ಅವನ ದರ್ಶನದಲ್ಲಿ ವಿಶ್ವರೂಪ ದರ್ಶನದ ಕಟಾಕ್ಷವಿದೆ, ಕವಿ ವಿರಾಟ ಕುಮಾರ ವ್ಯಾಸನ ಮಹಿಮೆಗೆ ಕಾರಣ ಅವನ ನಡುಗನ್ನಡದ ಭಾಮಿನಿ ಗಡಣದ ತರಂಗ ಶೈಲಿಯ ಸುಲಭ ಸರಳತೆ ಮಾತ್ರವಲ್ಲ, ಪ್ರವಾಹ ಪೂರ್ಣವಾದ ಪರ್ವತ ಭಾಗೀರಥಿಯ ಆದವ್ಯವೇಗದ, ಭೀಮದಮನ ವಿನ್ಯಾಸದಿಂದ ಮುನ್ನುಗ್ಗುವ ಆತನ ಪ್ರತಿಭೆಯೊಂದಿಗೆ ಅಲ್ಲಿ ಹೆಮ್ಮೋಡದಂತೆ, ದಿಗಂತದಿಂದ ಅನಿರೀಕ್ಷಿತವಾಗಿ ಮೇಲ್ವಾಯುವ ಅವನ ಕಲ್ಪನಾಶಕ್ತಿ ಕಾರ್ಗಾಳಿಯಂತೆ ಬೀಸಿ ಒಡೆಯುವ ಅವನ ಭಾವವೇಗ ಮತ್ತು ಆತನ ಕಾವ್ಯ ಲಕ್ಷ್ಮಿಗೆ, ಆಕೆಯ ನಾಡಿಯ ಸ್ಪಂದನಗಳೇನೋ ಎನ್ನುವಂತೆ ಸೃಷ್ಟಿಯಾಗಿವೆ. ಬಹುಮುಖ್ಯವಾಗಿ ಅವನ ಮಹಿಮೆಗೆ ಕಾರಣ ಆತನ ಧರ್ಮ ದೃಷ್ಟಿ, ಭಗವದ್ಭಕ್ತಿ ಹಾಗೂ ಋಷಿದರ್ಶನ, ಶೈಲಿಯ ಸುಳ್ಪು, ಧ್ವನಿ ಸೂಕ್ಷ್ಮತೆ, ವ್ಯವಹಾರ ಭೂಮಿಕೆಯಲ್ಲಿ ನಡೆಯುವ ನಾಗರಿಕ ವ್ಯಾಪಾರ ನಿರೂಪಣೆಯಲ್ಲಿ ಮೈದೋರುವ ನಯರುಚಿಯ ಸಂಸ್ಕೃತಿ, ಪ್ರಕೃತಿ–ಪ್ರಪಂಚದ ವಿವರ ಜ್ಞಾನ, ಪ್ರಕೃತಿ ಸೌಂದರ್ಯದಲ್ಲಿ ಗಾಢ ಮೋಹ, ಅದರ ವರ್ಣನೆಯಲ್ಲಿ ಅನುರಕ್ತಿ, ಅದರ ಶತಸಹಸ್ರಮುಖವಾದ ವೈವಿಧ್ಯದ ಒಂದೊಂದು ವಿವರದಲ್ಲಿಯ ಅಕ್ಕರೆಯ ಆಸಕ್ತಿ–ಇತ್ಯಾದಿಗಳಿಂದ ಮಹಾ ಕವಿ ಕುಮಾರವ್ಯಾಸನು ಅಮರನಾಗಿದ್ದಾನೆ.

ಭಾಮಿನಿ ಷಟ್ಪದಿಯ ಅತ್ಯುನ್ನತ ಶೃಂಗವೆನಿಸಿದ ಕುಮಾರವ್ಯಾಸ ಭಾರತವನ್ನು ಓದಿದರೆ ದುರ್ಬಲ ಹೃದಯ ಸಬಲವಾಗುವುದು. ಮಿಥ್ಯವೆಂದು ತೋರಿದುದು ಸತ್ಯವಾಗುವುದು, ಕುಗ್ಗಿದ ಚೇತನ ಎದ್ದು ನಿಲ್ಲುವುದು.

ಕನ್ನಡ ದೇಶಿ ಛಂದಸ್ಸಿನ ಪರಂಪರೆಯನ್ನು ಉಚ್ಛ್ರಾಯ ಸ್ಥಿತಿಗೇರಿಸಿದ ನಮ್ಮ ಕುಮಾರ ವ್ಯಾಸನದು ಕವಿಗಳಲ್ಲಿಯೇ ಹಿರಿಯ ತಲೆ, ಹಿರಿಯರಲ್ಲಿ ಹಿರಿಯ, ನಮ್ಮ ಸಾಹಿತ್ಯ ರತ್ನಗಳಲ್ಲಿ ನಾಯಕ ರತ್ನ ಎಂದು ಶ್ರೀಯುವರು ಹೇಳಿದ್ದಾರೆ.

ಕನ್ನಡದಲ್ಲಿ ಇಂತಹ ಬೇರೆ ಮಹಾ ಕಾವ್ಯಗಳಿವೆ ಎಂಬುದನ್ನು ಅಲ್ಲಗಳೆಯದೆ ಕುಮಾರವ್ಯಾಸ ಭಾರತವು ತನ್ನದೇ ಆದ ವಿಶಿಷ್ಟ ರೀತಿಯಲ್ಲಿ ಕನ್ನಡಿಗರ ಕರ್ಣಗಳಿಗೆ ಶ್ರವಣಾನಂದವನ್ನು ನೀಡಿ ಮಾನವತೆಯ ಮನವನ್ನು ಮೀಟಿ, ಸಂಗೀತ ಸೌರಭ ಸೂಸುವ ವೀಣೆಯಂದದಿ ಏಕಮೇವಾದ್ವಿತೀಯವಾದ ಮೇರು ಕೃತಿ, ಮಹಾಕಾವ್ಯ ಎಂದು ಹೇಳಲು ಅಭ್ಯಂತರವಿಲ್ಲ.

(ವಿವಿಧ ಮೂಲಗಳಿಂದ)



(10ನೇ ಪುಟದಿಂದ)

ಗಳೆರಡರ ಉತ್ಕೃಷ್ಟ ಸಮನ್ವಯವನ್ನು ಇಲ್ಲಿ ಸಾಧಿಸಲಾಗಿದೆ. ಇವರ 'ವಿವೇಕ ಚಿಂತಾಮಣಿ' ಒಂದು ವಿಶ್ವಕೋಶ. ಆ ಕಾಲದ ಸಂಗೀತಶಾಸ್ತ್ರ (1500) ಹೇಗಿತ್ತೆಂಬುದನ್ನು ನಿರೂಪಿಸುವ ಇದು–

"ಬಳಿಕ ಸಮಸ್ತ ರಾಗಗಳೊಳಗೆ ನಾಮಕ್ರಿಯ ಭೂಪಾಳಿ, ವಸಂತ, ನಾಟಿ, ಸಾರಂಗ, ಭೌಳಿ, ಕಾಂಬೋಜಿ, ಘೂರ್ಜರಿ, ಭೈರವಿ, ಗುಂಡಕ್ರಿಯೆ, ಬಿಲಹರಿ, ಧನ್ಯಾಸಿ, ಕಲ್ಯಾಣಿ, ಪದಮಂಜರಿ, ಬಂಗಾಳಿ, ದೇಶಿ, ದೇವಗಾಂಧಾರಿ, ಮೇಘರಂಜಿನಿ, ಕುರಂಜಿ, ಆಹರಿ, ಶ್ರೀರಾಗ, ವಹಡಿ, ಗೌಳಸಿಂಧು, ರಾಮಕ್ರಿಯೆ, ಶಂಕರಾಭರಣ, ಛಿಲ್ಲಕಿ, ದೇಶಾಕ್ಷಿ, ವರಾಳಿ, ಸಾವೇರಿ, ಮಂಗಳ ಕೌಶಿಕಿ, ನಾರಾಯಣ, ಅಠಾಣ, ಆರಭಿ, ತೋಡಿ, ಮಧ್ಯಮಾವತಿ ಎಂಬ ಮೂವತ್ತಾರು ರಾಗಗಳೇ ಮುಖ್ಯವಾಗಿ ಬಳಕೆಯಿಂದಧುನಾತರಲ್ಲಿ ಪ್ರಸಿದ್ಧಗೊಂಡಿರ್ಪವು" – ಎಂದು ಹೇಳಿ ನಂತರ ಆ ಕಾಲದ ವಾದ್ಯಭೇದವನ್ನು ವಿವರಿಸುತ್ತಾರೆ.

"ತಂತಿಯನ್ನು" ಕಟ್ಟಿ ನುಡಿಸುವ ವೀಣಾಕಾರವೇ ಸತವೆನಿಸುವುದು ; ಚರ್ಮವಂ ಕಟ್ಟಿ ನುಡಿಸುವ ಮುರಜಾದಿಕವೇ ಅನದ್ಧವೆನಿಸುವುದು, ಕಂಚಿನ ಪಾಶಾದಿಕವೇ ಘನವೆನಿಸುವುದು. ಊದಿ ಬಾರಿಸುವ ನುಡಿ ಮೋಳ ಮೊದಲಾದುವೇ ಸುಷಿರವೆನಿಸುವುದು. ಇಂತು ಚತುರ್ವಿಧ ವಾದ್ಯಂಗಳಂ ಅವಾಂತರ ಭೇದಗಳಿಂದ ಶೃಂಗವಾದ್ಯಗಳೆಂಬ ಕೊಂಬು, ತಮ್ಮಟೆವೆಂಬ ಹಲಿಗೆ, ಶಂಖವೆಂಬ ಧವಳ, ಭೇರಿಯೆಂಬ ಭಜಾ, ಜಯ ಘಂಟೆ ಎಂಬ ಜಾಗಟೆ, ಇತ್ಯಾದಿ ಮಹಾವಾದ್ಯಗಳೊಡನೆ ಹಾಗೂ ಭದ್ರವೆಂಬ ಕಾರಾಡಿ, ಶಾಸಕವೆಂಬ ನಗಾರಿ, ಭೀಷಣವೆಂಬ ತ್ರಾಸಾ, ಘೋಷಣವೆಂಬ ಹುಡುಕ್ಕಾ, ಡಿಂಡಿಮವೆಂಬ ಡಿಕ್ಕಿ, ಸಮರವೆಂಬ ಡೋಲು, ಝುರ್ಝುರವೆಂಬ ಝಡಯಿ, ಕಾಹಳವೆಂಬ ಗೌಂಕಾಳೆ, ದುಂದುಭಿಯೆಂಬ ಘೋರ, ಘಂಟಿಕೆ ಎಂಬ ಘಂಟೆ ಇತ್ಯಾದಿ ವಾದ್ಯಗಳಿಂದ ಸಂಗೀತದ ಸವಿಯನ್ನು ನೀಡಬಹುದೆಂದು ಪ್ರತಿಪಾದಿಸುತ್ತಾರೆ ಹೀಗೆ ಆಧ್ಯಾತ್ಮ ಲೋಕದಲ್ಲಿ ಎಂತೋ ಅಂತೆಯೇ ಸಂಗೀತ ರಂಗದಲ್ಲಿಯೂ ನಿಜಗುಣರು ಶಾಸ್ತ್ರವನ್ನು ಪ್ರತಿಪಾದಿಸಿ ಬಹು ದೊಡ್ಡ ಸ್ಥಾನವನ್ನು ಪಡೆದಿದ್ದಾರೆ

ನಂತರದ ದಾಸಕೂಟದವರಿಂದ ಸಂಗೀತ ವ್ಯಾಪಕವೂ, ಜನಪ್ರಿಯವೂ ಆದ ಮಾಧ್ಯಮವಾಗಿ ಪರಿಣಮಿಸಿತು. ದಾಸಕೂಟದಲ್ಲಿ ಮಧ್ವಾಚಾರ್ಯರಿಂದ ಮೂರನೆಯ ಪಟ್ಟದ ಸ್ವಾಮಿಗಳಾದ ನರಹರಿತೀರ್ಥರು (1281) ಪ್ರಪ್ರಥಮರು ಎನ್ನಬಹುದು.

ಇವರ ನಂತರ ಪುರಂದರ ದಾಸರು ಕೀರ್ತನೆಗಳ ಪದ್ಧತಿಯನ್ನು ಕೈಗೆತ್ತಿಕೊಳ್ಳುವ ಮುನ್ನ ಅವರ ಗುರು ವ್ಯಾಸರಾಯರೂ ಅನೇಕ ಕೃತಿಗಳನ್ನು ರಚಿಸಿದ್ದರು. ಆದರೂ ಪುರಂದರದಾಸರು ಸಂಗೀತಾಭ್ಯಾಸದ ಒಂದು ಹೊಸ ಹಾದಿಯನ್ನು ಹಾಕಿಕೊಟ್ಟು, ಅದು ವಿಪುಲವಾದ ರಾಗಗಳನ್ನು ಪಡೆದುಕೊಂಡು ವೈವಿಧ್ಯವೂ, ಶಾಸ್ತ್ರೀಯವೂ, ಪ್ರಾಯೋಗಿಕವೂ ಆದ ಮಾರ್ಗದಲ್ಲಿ ಪರಿಣತ ಸ್ವರೂಪ ಪಡೆಯುವಂತೆ ಮಾಡಿದರೆಂದರೆ ಅತಿಶಯವಾಗದು. ಕ್ಲಿಷ್ಟವೂ ಅವ್ಯವಸ್ಥಿತವೂ ಆದ ಸಂಕೇತದಲ್ಲಿ ವ್ಯವಸ್ಥೆಯೊಂದನ್ನು ರೂಪಿಸುವ ಮೊಟ್ಟ ಮೊದಲ ಕಾರ್ಯ ಮಾಡಿದವರು ಪುರಂದರ ದಾಸರು. ಇವರು ಮಾಡಿದ ಇನ್ನೊಂದು ಮಹತ್ಕಾರ್ಯವೆಂದರೆ ಅನೇಕ ಜಾನಪದ ಮಟ್ಟುಗಳಿಗೆ ಶಾಸ್ತ್ರೀಯವಾದ ರಾಗಗಳ ಸ್ವರೂಪವನ್ನು ಕೊಟ್ಟಿದ್ದು. ಇದರಿಂದ ರಾಗಗಳಲ್ಲಿ ವೈವಿಧ್ಯ ಹಾಗೂ ಸರಳತೆ ಸಾಧಿಸಲು ಅವರಿಗೆ ಸಾಧ್ಯವಾಯಿತು. ಇದರಿಂದಲೇ ಅವರನ್ನು "ಕರ್ನಾಟಕ ಸಂಗೀತ ಪಿತಾಮಹ" ಎಂದು ಕರೆದಿರುವಂತೆ ತೋರುತ್ತದೆ.

ಇವರ ನಂತರ ಕನಕದಾಸರಾದಿಯಾಗಿ ಅನೇಕ ದಾಸ ಮಹನೀಯರು ಸಂಗೀತವನ್ನು ಬೆಳೆಸಿಕೊಂಡು ಬಂದರು. ಕರ್ನಾಟಕ ಸಂಗೀತದ ಸೀಮಾ ಪುರುಷರಾದ ತ್ಯಾಗರಾಜರೂ ಸಹ ಪುರಂದರ ದಾಸರನ್ನು ಗುರುಗಳೆಂದು ಅಂಗೀಕರಿಸುತ್ತಿದ್ದಾರೆ. ಹಾಗೂ ದಾಸರ ಕೃತಿಗಳಿಂದ ಪ್ರೇರಿತರಾಗಿ ಅನೇಕ ಕೃತಿಗಳನ್ನು ರಚಿಸಿದ್ದಾರೆ. (ಕರ್ನಾಟಕಸಂಗೀತದ ರತ್ನತ್ರಯವೆಂಬ ತ್ಯಾಗರಾಜ, ಮುತ್ತುಸ್ವಾಮಿ ದೀಕ್ಷಿತರು, ಶ್ಯಾಮಾಶಾಸ್ತ್ರಿಗಳನ್ನೂ ಹಾಗೂ ಸ್ವಾತಿ ತಿರುನಾಳರನ್ನು ಭೂಗೋಳದಿಂದ ಹೊರಗಿನವರದಾರೂ ಸಂಗೀತದಿಂದ ಒಳಗಿನವರೇ ಎಂದು ಮನ್ನಿಸಬೇಕು )

ನಂತರ ವೀಣೆ ಶೇಷಣ್ಣ, ಬಿಡಾರಂ ಕೃಷ್ಣಪ್ಪ, ವಾಸುದೇವಾಚಾರ್ಯರಾದಿಗಳಿಂದಾಗಿ ಕರ್ನಾಟಕದ ಶಾಸ್ತ್ರಕಾರರ, ವಾಗ್ಗೇಯಕಾರರ, ಸಂತರ ಪ್ರಭಾವವು ಸಂಗೀತದ ಬೆಳವಣಿಗೆಯಲ್ಲಿ ಪ್ರಧಾನ ಪಾತ್ರವನ್ನು ವಹಿಸಿತು.

ನಂತರದಿಂದ ಲಾಕ್ಷಣಿಕರು, ಪಂಡಿತರು, ಮೇಧಾವಿಗಳು ಸಂಗೀತವನ್ನು ವೈಶಿಷ್ಟ್ಯಪೂರ್ಣವಾಗಿ ಬೆಳೆಸಿ ಈ ಸಂಗೀತ ಪದ್ಧತಿಗೆ ಕೊಟ್ಟ ಕರ್ನಾಟಕ ಸಂಗೀತ' ಎನ್ನುವ ಹೆಸರನ್ನು ಅನ್ವರ್ಥಗೊಳಿಸಿದರು.

ತಿರುಮಲೆ ತಿರುಪತಿ ದೇವಸ್ಥಾನಗಳು

# ದಾನಯೋಜನೆಯಲ್ಲಿ

# ಯಾತ್ರಿಕ ವಸತಿ ಗೃಹಗಳು

ತಿರುಮಲೆಯಲ್ಲಿ ನಿರಂತರ ಹೆಚ್ಚುತ್ತಿರುವ ಯಾತ್ರಿಕರ ಅನುಕೂಲಗಳಿಗಾಗಿ ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತವು ಹೆಚ್ಚಿನ ವಸತಿ ಸೌಕರ್ಯವನ್ನು ಒದಗಿಸಲು ತೀರ್ಮಾನಿಸಿದೆ. ಈ ಬೃಹತ್ ಕಾರ್ಯವನ್ನು ಭಕ್ತರ ಹಾಗೂ ಸೇವಾಕರ್ತರ ಸಕ್ರಿಯ ಸಹಕಾರದಿಂದ ನೆರವೇರಿಸಲು ತಿ.ತಿ.ದೇ. ನಿರ್ಧರಿಸಿದೆ.

ಈ ಯೋಜನೆಯ ವಿವರಗಳನ್ನು ಆಸಕ್ತರಿಗಾಗಿ ಈ ಕೆಳಗಿನಂತೆ ನಿರೂಪಿಸಲಾಗಿದೆ.

## ಗರುಡಾದ್ರಿನಗರ ವಸತಿಯೋಜನೆ

ಈ ಯೋಜನೆಯನ್ವಯ ಎರಡು ಅಂತಸ್ತುಗಳ 16 ವಸತಿಗೃಹಗಳನ್ನು (ಪ್ರತಿಯೊಂದು ಅಂತಸ್ತಿನಲ್ಲಿ 4 ಸೂಟ್‌ಗಳಿರುವಂತೆ) ನಿರ್ಮಿಸಲಾಗುವುದು. ಪ್ರತಿಯೊಂದು ಸೂಟ್ ಸಹ 10' × 12' ಗಳಿದ್ದು ಸ್ನಾನ ಶೌಚಾಗಾರಗಳೊಂದಿಗೆ ಹಾಗೂ ಸಾಮಾನ್ಯ ಅಂಗಳದೊಂದಿಗೆ ಕೂಡಿರುವುದು.

ಒಟ್ಟು 320 ಚದರಡಿ ಪ್ಲಿಂತ್ ವಿಸ್ತೀರ್ಣದ ಪ್ರತಿಸೂಟ್‌ಗಾಗಿ ದಾನ ನೀಡಬೇಕಾದ ಮೊಬಲಗು ರೂ 30,000 ಮಾತ್ರ.

ಒಟ್ಟು 128 ಸೂಟ್‌ಗಳಿರುವ ಈ ಯೋಜನೆಯಲ್ಲಿ ಆಸಕ್ತ ಭಕ್ತರು ಈಗಾಗಲೇ 66 ಸೂಟ್‌ಗಳಿಗಾಗಿ ದಾನಗಳನ್ನು ನೀಡಿದ್ದಾರೆ!

8 ಸೂಟ್‌ಗಳ ಒಂದು ವಸತಿಗೃಹದ ವೆಚ್ಚವಾದ 2.4 ಲಕ್ಷ ರೂಗಳನ್ನಾಗಲೀ, 4 ಸೂಟ್‌ಗಳ ವೆಚ್ಚವಾದ 1.2 ಲಕ್ಷ ರೂಗಳನ್ನಾಗಲೀ ಅಥವಾ ಎರಡು ಸೂಟ್‌ಗಳ ವೆಚ್ಚವಾದ ರೂ 60,000 ಗಳನ್ನಾಗಲೀ ನೀವು ದಾನ ನೀಡಬಹುದು.

## ರಾಮಬಗೀಚಾ ಅತಿಥಿಗೃಹ ಯೋಜನೆ

ತಿರುಮಲೆಯ ದೇವಾಲಯದ ಈಶಾನ್ಯ ಭಾಗದಲ್ಲಿನ ರಾಮ ಬಗೀಚಾದಲ್ಲಿ ಮೂರು ಅತಿಥಿ ಗೃಹಗಳನ್ನು ನಿರ್ಮಿಸಲು ತೀರ್ಮಾನಿಸಲಾಗಿದೆ.

ಪ್ರತಿಯೊಂದು ಅತಿಥಿಗೃಹವೂ ಮೂರು ಅಂತಸ್ತುಗಳನ್ನು ಹೊಂದಿದ್ದು, ಪ್ರತಿ ಅಂತಸ್ತಿನಲ್ಲಿ 50 ಸೂಟ್‌ಗಳಿರುತ್ತವೆ. ಪ್ರತಿಯೊಂದು ಸೂಟ್ 14' × 16' ವಿಸ್ತೀರ್ಣವಿದ್ದು ಸ್ನಾನ ಶೌಚ ಗೃಹಗಳು ಇರುತ್ತವೆ. ಪ್ಲಿಂತ್ ವಿಸ್ತೀರ್ಣ ಸುಮಾರು 600 ಚ. ಅಡಿಗಳಾಗಿದ್ದು ಸಾಮಾನ್ಯ ಅಂಗಳವಿರುವುದು. ಪ್ರತಿ ಸೂಟ್‌ನ ನಿರ್ಮಾಣಕ್ಕೆ ತಗಲುವ ದಾನದ ಮೊಬಲಗು ರೂ 60,000 ಮಾತ್ರ.

ತೀರ್ಮಾನಿಸಲಾದ 450 ಸೂಟ್‌ಗಳಲ್ಲಿ ಈಗಾಗಲೇ 37 ಸೂಟ್‌ಗಳಿಗಾಗಿ ದಾನಗಳನ್ನು ಸ್ವೀಕರಿಸಲಾಗಿದೆ!

## ನಿಮ್ಮ ದಾನದ ಪ್ರತಿಯಾಗಿ ದೊರೆಯುವ ಸೌಲಭ್ಯಗಳು ಈ ರೀತಿ ಇವೆ

1. ದಾನಿಗಳ ಹೆಸರಿನ ಫಲಕವನ್ನು ಕಟ್ಟಡದಲ್ಲಿ ಸ್ಥಾಪಿಸಲಾಗುವುದು
2. ಒಂದು ಬಾರಿಗೆ ಹತ್ತು ದಿನಗಳಿಗೆ ಮೀರದಂತೆ ದಾನಿಯು ಒಂದು ವರ್ಷದಲ್ಲಿ 60 ದಿನಗಳ ಕಾಲ ಉಚಿತವಾಗಿ ತಮ್ಮ ದಾನದ ಕಟ್ಟಡದಲ್ಲಿ ತಂಗಬಹುದು.
3. ದಾನಿಯ ಬಂಧುಗಳಿಗೆ ತಿರುಮಲೆಯಲ್ಲಿ ವಸತಿ ನೀಡುವಲ್ಲಿ ಆದ್ಯತೆ ನೀಡಲಾಗುವುದು.
4. ಅಪೇಕ್ಷಿಸಿದಾಗ ದಾನಿಯ ಕಟ್ಟಡ ಖಾಲಿಯಿಲ್ಲದಲ್ಲಿ ಇತರ ಏರ್ಪಾಡುಗಳನ್ನು ಮಾಡಿಕೊಡಲಾಗುವುದು.

ಕೂಡಲೇ ಬರೆಯಿರಿ – ಕಾರ್ಯನಿರ್ವಹಣಾಧಿಕಾರಿ
ತಿ. ತಿ. ದೇ. ತಿರುಪತಿ

# ಕೌಟಿಲ್ಯನ ಅರ್ಥಶಾಸ್ತ್ರ

ಪುರುಷಾರ್ಥಗಳಾದ ಧರ್ಮ, ಅರ್ಥ, ಕಾಮ, ಮೋಕ್ಷಗಳಲ್ಲಿ ಎರಡನೆಯದಾದ ಅರ್ಥವನ್ನು ಕುರಿತುದು ಅರ್ಥಶಾಸ್ತ್ರ. ಸಾಮಾನ್ಯವಾಗಿ ಧರ್ಮಶಾಸ್ತ್ರದ ಜೊತೆಯಲ್ಲಿಯೇ ಅದು ಒಂದು ಭಾಗವಾಗಿ ಅಭ್ಯಸಿಸಲ್ಪಡುವುದು. ತ್ರಿವರ್ಗಗಳಾದ ಧರ್ಮ, ಅರ್ಥ, ಕಾಮಗಳ ಸಹಶೀಲತೆಯೇ ಈ ದ್ವಂದ್ವ ವಿಚಾರಣೆಗೆ ಮೂಲ. ಇವುಗಳ ವ್ಯಾಪ್ತಿ ಹೆಚ್ಚು ಕಡಿಮೆ ಒಂದೇ ರೀತಿ ಇರುತ್ತದೆ. ಈ ಶಾಸ್ತ್ರದ ಮುಖ್ಯ ಧ್ಯೇಯ, ಇರುವುದಕ್ಕಿಂತ ಹೊಸದಾಗಿ ಹೆಚ್ಚಾಗಿ ಸಂಪಾದಿಸುವುದು. ರಕ್ಷಿಸುವುದು ಮತ್ತು ಅಭಿವೃದ್ಧಿಪಡಿಸಿ ಯೋಗ್ಯ ಅಧಿಕಾರಿಗೆ ಸರಿಯಾಗಿ ವಿನಿಯೋಗ ಮಾಡುವುದು.

ಅರ್ಥಶಾಸ್ತ್ರ ತತ್ತ್ವಗಳು ರಾಮಾಯಣ ಮಹಾಭಾರತಗಳಲ್ಲಿ ವಿಶದೀಕೃತವಾಗಿವೆ. ಅವುಗಳಲ್ಲಿಯೂ ಮತ್ತು ಇತರ ಧರ್ಮಶಾಸ್ತ್ರಗಳಲ್ಲಿಯೂ ಉಕ್ತವಾಗಿರುವ ನೀತಿ ಶ್ಲೋಕಗಳೇ ಈ ಶಾಸ್ತ್ರಕ್ಕೆ ಆಧಾರ.

ಭಾರತೀಯ ಅರ್ಥಶಾಸ್ತ್ರವು ದಂಡನೀತಿ, ನೀತಿಶಾಸ್ತ್ರ, ರಾಜನೀತಿ ಎಂಬ ಬೇರೆ ಬೇರೆ ಹೆಸರಿನಿಂದ ಕರೆಯಲ್ಪಟ್ಟು ರಾಜನೀತಿಗೆ ಸಂಬಂಧಪಟ್ಟ ವಿಷಯಗಳನ್ನೇ ಅಲ್ಲದೇ ಈಚಿನ ಧರ್ಮಶಾಸ್ತ್ರ, ಸಮಾಜಶಾಸ್ತ್ರ, ವ್ಯವಹಾರಶಾಸ್ತ್ರ, ಅರ್ಥಶಾಸ್ತ್ರ ಮೊದಲಾದವುಗಳಿಗೆ ಸಂಬಂಧಪಟ್ಟ ಅನೇಕ ವಿಷಯಗಳನ್ನು ಕುರಿತು ವ್ಯವಹರಿಸಿದೆ. ಈ ವಿಷಯಗಳು ಮೊದಲು ಧರ್ಮಸೂತ್ರಗಳಲ್ಲಿಯೂ ಅನಂತರ ಧರ್ಮಶಾಸ್ತ್ರಕ್ಕೆ ಸಂಬಂಧಪಟ್ಟ ಸ್ಮೃತಿ ನಿಬಂಧಗಳಲ್ಲಿಯೂ ವಿಚಾರಮಾಡಲ್ಪಟ್ಟಿವೆ. ಆದರೆ ರಾಜನೀತಿಯನ್ನೇ ಕರಿತು ಪ್ರತ್ಯೇಕ ಗ್ರಂಥಗಳು ಆದಿಕಾಲದಿಂದ ರಚಿತವಾಗಿವೆ. ಇಂತಹ ಕೃತಿಗಳಲ್ಲಿ ವಿಷ್ಣುಗುಪ್ತನೆಂಬ ಅಪರ ನಾಮಧೇಯವುಳ್ಳ ಕೌಟಿಲ್ಯನಿಂದ ರಚಿತವಾಗಿರುವ "ಅರ್ಥಶಾಸ್ತ್ರ"ವೇ ಪ್ರಾಚೀನವಾದುದು. ಇದರಲ್ಲಿ ಆ ಕಾಲದಲ್ಲಿ ಪ್ರಮಾಣಭೂತವೆಂದು ಅಂಗೀಕೃತವಾದ ಇತರ ಕೃತಿಗಳೂ ಉಕ್ತವಾಗಿವೆ. ಕೌಟಿಲ್ಯನ ಅದ್ಭುತವಾದ ಕೃತಿರತ್ನವು ಪ್ರಾಶಸ್ತ್ಯಕ್ಕೆ ಬಂದಂತೆಲ್ಲ ಪ್ರಾಚೀನ ಗ್ರಂಥಗಳು, ಗ್ರಂಥಕಾರರು ನಾಮಾವಶೇಷರಾದರು. ಕೌಟಿಲ್ಯನು ತನಗೆ ಹಿಂದೆ ಇದ್ದ ಎಲ್ಲ ಪಂಥಗಳನ್ನು ವಿಮರ್ಶೆಮಾಡಿ ತನ್ನ ಮತವನ್ನು ತನ್ನ ಅರ್ಥಶಾಸ್ತ್ರದಲ್ಲಿಯೇ ಸ್ಥಾಪಿಸಿದ್ದಾನೆ. ರಾಜನೀತಿ ಗ್ರಂಥಗಳಲ್ಲಿ ಕೌಟಿಲ್ಯನ ಅರ್ಥಶಾಸ್ತ್ರ ಅತಿ ಮುಖ್ಯವಾದುದು. ಆದರಿಂದ ಈಚಿನ ಆ ಶಾಖೆಯ ಗ್ರಂಥಗಳಿಗೆಲ್ಲ ಅದೇ ಆಧಾರ. ಕ್ರಿ.ಶ. ೧೯೦೯ರಲ್ಲಿ ಅದು ಮೊದಲನೆ ಸಲ ಪ್ರಕಾಶವಾದಂದಿನಿಂದ ಇದರ ಕಾಲ ಮತ್ತು ಕರ್ತೃವಿನ ವಿಷಯದಲ್ಲಿ ವಿಶೇಷ ಚರ್ಚೆಗಳು ಪ್ರಾರಂಭವಾಗಿ ಇನ್ನೂ ಅಪೂರ್ಣವಾಗಿಯೇ ಉಳಿದಿವೆ. ಅರ್ಥಶಾಸ್ತ್ರವು, ಡಾ॥ ಆರ್. ಶಾಮಶಾಸ್ತ್ರಿಗಳಿಂದ ಮೈಸೂರು ಪ್ರಾಚ್ಯ ಕೋಶಾಗಾರ ಗ್ರಂಥಮಾಲೆಯಲ್ಲಿಯೂ, ಡಾ॥ ಟಿ. ಗಣಪತಿಶಾಸ್ತ್ರಿಗಳಿಂದ ತಿರುವನಂತಪುರದ ಪ್ರಾಚ್ಯ ಗ್ರಂಥಮಾಲೆಯಲ್ಲಿಯೂ, ಡಾ॥ ಜಾಲಿಯವರಿಂದ ಪಂಜಾಬಿನ ಗ್ರಂಥ ಮಾಲೆಯಲ್ಲಿಯೂ ಪ್ರಕಾಶಿತವಾಗಿದೆ. ಈಗ ಈ ಗ್ರಂಥ ಪ್ರಕಟವಾದ ಮೇಲೆ ಹಿಂದೂ ರಾಜನೀತಿಯ ವಿಷಯದಲ್ಲಿ ಪಾಶ್ಚಾತ್ಯರಿಗಿದ್ದ ಅನೇಕ ತಪ್ಪು ಅಭಿಪ್ರಾಯಗಳು ಮಾಯವಾಗಿ, ಅದು ಮ್ಯಾಕಿಯವೆಲ್ಲಿಯ 'Prince' ಎಂಬ ಗ್ರಂಥಕ್ಕೆ ಹೇಗೂ ಕಡಿಮೆಯಿಲ್ಲವೆಂದು ಅಂಗೀಕೃತವಾಗಿದೆ.

ಭಾರತೀಯ ಸಂಪ್ರದಾಯಾಭಿಪ್ರಾಯದ ಪ್ರಕಾರ 'ಅರ್ಥಶಾಸ್ತ್ರ'ವು ಕೌಟಿಲ್ಯನಿಂದಲೇ ರಚಿತವಾದುದೆಂದು ಸ್ಪಷ್ಟವಾಗಿದೆ. ಇವಕ್ಕೆ ಗ್ರಂಥದಲ್ಲಿ ಪೂರ್ಣ ಆಧಾರಗಳಿವೆ. ಕೌಟಿಲ್ಯನು ಚಂದ್ರಗುಪ್ತಮೌರ್ಯನ ಮಂತ್ರಿಯೆಂಬುದು ಖಚಿತವಾದ ಅಭಿಪ್ರಾಯ. ಈ ಅಭಿಪ್ರಾಯವು ಮುಂದಿನ ಗ್ರಂಥಕಾರರಿಂದ ದೃಢೀಕೃತವಾಗಿದೆ. ಈಚಿನ ಕೆಲವು ವಿಮರ್ಶಕರು ಅದು ಕೌಟಿಲ್ಯಪ್ರಣೀತವಲ್ಲವೆಂದೂ ಇತ್ತೀಚಿನದೆಂದೂ ಅಭಿಪ್ರಾಯಪಟ್ಟಿದ್ದಾರೆ. ಆದರೆ ಇತ್ತೀಚಿನ ಅನೇಕ ಗ್ರಂಥಗಳ ಆಧಾರದಿಂದ ಅವನದೇ ಎಂದು ಸಿದ್ಧಾಂತವಾಗಿದೆ.

ಕೌಟಿಲ್ಯನ 'ಅರ್ಥಶಾಸ್ತ್ರ'ವು ಬಹು ದೊಡ್ಡ ಗ್ರಂಥ. ಇದರಲ್ಲಿ ೬೦೦೦ ಶ್ಲೋಕಗಳು ೧೫ ಅಧಿಕರಣಗಳಾಗಿಯೂ ೧೫೦ ಪ್ರಕರಣಗಳಾಗಿಯೂ ೧೮೦ ಭಾಗಗಳಾಗಿಯೂ ವಿಭಾಗಿಸಲ್ಪಟ್ಟಿವೆ. ಪ್ರತಿಯೊಂದು ಪ್ರಕರಣವೂ ಗದ್ಯದಲ್ಲಿಯೇ ರಚಿತವಾಗಿ ಅಂತ್ಯದಲ್ಲಿ ಅಲ್ಲಿ ಉಕ್ತವಾಗಿರುವ ವಿಷಯದ ಸೂಚನೆಯಂತಿರುವ ಒಂದು ಶ್ಲೋಕವನ್ನು ಹೊಂದಿದೆ. ಕೌಟಿಲ್ಯನಿಂದಲೇ ರಚಿತವಾದ ವ್ಯಾಖ್ಯಾನವುಳ್ಳ ಕೆಲವು ಸೂತ್ರಗಳು ಇವೆ. ಅಪಾರ್ಥ ನಿವಾರಣೆಗಾಗಿ ತಾನೇ ವ್ಯಾಖ್ಯಾನವನ್ನು ರಚಿಸಿರುವಂತೆ ಗ್ರಂಥಕರ್ತನೇ ತಿಳಿಸುತ್ತಾನೆ. ಅಧಿಕರಣಗಳು ಕ್ರಮವಾಗಿ ವಿನಯಾಧಿಕಾರಿಕಂ (Concerning discipline) ಅಧ್ಯಕ್ಷಪ್ರಚಾರಃ (The duties of government superin-tendents) ಧರ್ಮಸ್ಥೀಯಂ (Concerning law) ಕಂಟಕಶೋಧನಂ (Removal of Thorns) ಯೋಗವೃತ್ತಂ (Conduct of Courtiers) ಮಂಡಲಯೋನಿಃ (The Source of Sovereign State) ಷಾಡ್ಗುಣ್ಯಂ (The end of six-fold policy) ವ್ಯಸನಾಧಿಕಾರಿಕಂ (Concerning vices and Calamities) ಅಭಿಯಾಸ್ಯತ್ ಕರ್ಮ (The work of an invader) ಸಾಂಗ್ರಾಮಿಕಂ (Relating to wars) ಸಂಘವೃತ್ತಂ (The conduct of

---

ಡಾ॥ ಎನ್. ಅನಂತರಂಗಾಚಾರ್

---

corporation) ಅಬಲೀಯಸಂ (Concerning a powerful enemy) ದುರ್ಗಲಂಭೋಪಾಯಂ (Strategic means to capture a fortress) ಔಪನಿಷದಿಕಂ (Secret means) ತಂತ್ರಯುಕ್ತಿ (The plan of the treatise) ಎಂಬುದಾಗಿ ನಾಮಕರಣ ಮಾಡಲ್ಪಟ್ಟಿವೆ. ಇವುಗಳಲ್ಲಿ ದಂಡನೀತಿಯ ಸ್ವರೂಪ, ದಂಡನೀತಿಗೂ ಇತರ ಶಾಸ್ತ್ರಗಳಿಗೂ ಇರುವ ಸಂಬಂಧ, ರಾಜನ ವಿದ್ಯಾಭ್ಯಾಸ, ಮಂತ್ರಿಗಳ ಮತ್ತು ಅಧಿಕಾರಿಗಳ ಕರ್ತವ್ಯ, ರಾಜ್ಯಾಡಳಿತದ ವ್ಯವಸ್ಥೆ, ವ್ಯವಸಾಯ ವಾಣಿಜ್ಯ ಮುಂತಾದುವುಗಳ ಆರ್ಥಿಕ ಸಮೀಕರಣ, ಯುದ್ಧ ಮತ್ತು ಶಾಂತಿನೀತಿ, ರಾಜ್ಯಾಂಗಗಳು, ಏಳಿಗೆ ಮತ್ತು ಅಳಿವು ಮೊದಲಾದ ರಾಜ್ಯಶಾಸ್ತ್ರಕ್ಕೆ ಸಂಬಂದಪಟ್ಟ ಎಲ್ಲ ಅಂಶಗಳೂ ಬಹು ಕೂಲಂಕಷವಾಗಿ ವಿವೃತವಾಗಿವೆ. ಅವರಲ್ಲಿಯೂ ರಾಷ್ಟ್ರದ ಸ್ವರೂಪ, ಉದ್ದೇಶ, ಸಪ್ತಾಂಗಗಳು, ಅವುಗಳ ಪರಸ್ಪರ ಸಂಬಂಧ, ಮಂತ್ರಾಲೋಚನೆ, ಆಡಳಿತಕ್ರಮ, ಸಾಮಾಜಿಕ ಜೀವನದ ವ್ಯವಸ್ಥೆ, ಯುದ್ಧದ ರೀತಿ ನೀತಿಗಳು, ಕುಟಿಲ ತಂತ್ರೋಪಾಯಗಳು ಮೊದಲಾದುವು ಬಹು ಆಕರ್ಷಕವಾಗಿವೆ. ಕೌಟಿಲ್ಯನ ಪ್ರಕಾರ 'ಅರ್ಥಶಾಸ್ತ್ರ'ವು ಇತಿಹಾಸದ ಒಂದು ಭಾಗ; ವೇದಕ್ಕೆ ಸಮಾನವಾದುದು.

ಇಲ್ಲಿ ವರ್ಣಿತವಾಗಿರುವುದು ಸಾಂಕುಶ ಪ್ರಭುತ್ವ. ರಾಷ್ಟ್ರಕ್ಕೆ ರಾಜನೇ ಸರ್ವಾಧಿಕಾರಿಯಾದರೂ, ಅವನ ಅಧಿಕಾರಕ್ಕೆ ಮಿತಿಯುಂಟು ; ಗುರಿಯುಂಟು.

ಪ್ರಜಾಸುಖೇ ಸುಖಂ ರಾಜ್ಞಃ
ಪ್ರಜಾನಾಂ ಚ ಹಿತೇ ಹಿತಂ ।
ನಾತ್ಮಪ್ರಿಯಂ ಹಿತಂ ರಾಜ್ಞಃ
ಪ್ರಜಾನಾಂ ತು ಪ್ರಿಯಂ ಹಿತಂ ॥

ರಾಜ್ಞೋಹಿ ವ್ರತಮುತ್ಥಾನಂ
ಯಜ್ಞಃ ಕಾರ್ಯಾನುಶಾಸನಂ ।
ದಕ್ಷಿಣಾವೃತ್ತಿ ಸಾಮ್ಯಂ ಚ
ದೀಕ್ಷಿತಸ್ಯಾಭಿಷೇಚನಂ ॥

ಧರ್ಮಾಯ ರಾಜಾಭವತಿ
ನ ಕಾಮ ಕರಣಾಯತು ।
ಚತುರ್ವರ್ಣಾಶ್ರಮೋ ಲೋಕೋ
ರಾಜ್ಞಾದಂಡೇನ ಪಾಲಿತಃ ॥

ಸ್ವಧರ್ಮ ಕರ್ಮಾಭಿರತಃ
ವರ್ತತೇ ಸ್ವೇಷು ವರ್ತ್ಮಸು ।

ಕೌಟಿಲ್ಯನ ಪ್ರಕಾರ ಯಾವ ಉದ್ದೇಶಗಳು ಮತ್ತು ಸಾಧನೆಗಳು ಮಾನವವರ್ಗವನ್ನು ಉದ್ಧರಿಸುವುವೋ ಅವೇ ಧರ್ಮ ಸಾಮಾಜಿಕ ರಾಜಕೀಯ ಮತ್ತು ಅಧ್ಯಾತ್ಮಿಕ ಪ್ರಗತಿಗೆ ಸಂಬಂಧಿಸಿದ ವಿಷಯಗಳೆಲ್ಲವೂ, ಮಾನವನ ಪ್ರಗತಿಗೆ ಸಹಕಾರಿಗಳಾಗಿರುವುದರಿಂದ ಅವುಗಳೂ ಧರ್ಮದಲ್ಲಿ ಸಮಾವೇಶವಾಗುವುವು. ಜೀವನದ ಮುಖ್ಯ ಗುರಿ ಧರ್ಮ, ಅರ್ಥ, ಕಾಮ, ಮೋಕ್ಷಗಳ ಸಾಧನೆ. ಈ ಉದ್ದೇಶದ ಸುಲಭ ಸಾಧನೆಗಾಗಿಯೇ ಜ್ಞಾನಾರ್ಜನೆ, ಸಂರಕ್ಷಣೆ, ಕೃಷಿ ಎಂಬ ವೃತ್ತಿಗಳು ನಾಲ್ಕುವರ್ಣಗಳ ವಿಹಿತಧರ್ಮಗಳು.

ಅರ್ಥಶಾಸ್ತ್ರದಲ್ಲಿ ವರ್ಣಿತವಾಗಿರುವ ಸಂಸ್ಕೃತಿಯಲ್ಲಿ ದೂಷ್ಯವೂ ಅಗ್ರಾಹ್ಯವೂ ಆದ ಅನೇಕ ರೀತಿ ನೀತಿಗಳೂ ದುಷ್ಟ ಪದ್ಧತಿಗಳೂ ಕಾಣುತ್ತವೆ. ಸ್ಮೃತಿಗಳಿಗೆ ವಿರುದ್ಧವಾದ ಮತ್ತು ಅಧರ್ಮವೆಂದು ಕಾಣುವ ಅನೇಕ ಆಚಾರಗಳೂ ಪದ್ಧತಿಗಳೂ ಕೌಟಿಲ್ಯನ ಒಪ್ಪಿಗೆಯನ್ನು ಪಡೆದಿವೆ. ಪ್ರಭುವಿನ ಶಕ್ತಿ ಮತ್ತು ರಾಷ್ಟ್ರವನ್ನು ಗಳಿಸಲು ಎಷ್ಟು ಹಸನಾದ ನೀತಿ ಉಪಾಯಗಳನ್ನಾದರೂ ಆಚರಿಸಬಹುದು ಎನ್ನುವುದು ಅವನ ಅಭಿಪ್ರಾಯ.

ಇದಕ್ಕೆ ಕಾರಣ ಅವನು ಧ್ಯೇಯವಾದಿಯಲ್ಲ. ಕೇವಲ ಕ್ರಿಯಾವಾದಿ. ಅವನ ಗುರಿ ಅವನ ಮನಸ್ಸಿನಲ್ಲಿ ಸ್ಪಷ್ಟವಾಗಿತ್ತು. ಪ್ರಜೆಗಳ ಐಹಿಕ ಅಭ್ಯುದಯವೇ ಅದು. ಕಾಲಕ್ಕೆ ಅನುಗುಣವಾದ ನೀತಿಯ ಮೇಲೆ ರಾಜ್ಯಸ್ಥಾಪನೆ ಮಾಡುವುದು ಉತ್ತಮವೆಂಬುದು ಅವನ ನಂಬಿಕೆ. ರಾಜಕೀಯ ಪ್ರಗತಿಗೆ ಮತಧರ್ಮ ಅಡ್ಡಿಯಾಗಿ ಬಂದರೆ ಅದನ್ನು ತ್ಯಜಿಸಲು ಆತ ಸಿದ್ಧ.

ಆತನ ತತ್ತ್ವವೂ ಅದಕ್ಕೆ ಅನುಗುಣವಾದುದು. ರಾಷ್ಟ್ರವು ಧರ್ಮಕ್ಕೆ ಆಸರೆಯೆಂಬುದು ಅವನ ಪ್ರಕಾರ ಸರಿಯಲ್ಲ. ಪ್ರಜಾಹಿತಕ್ಕಾಗಿಯೇ ರಾಷ್ಟ್ರನಿರ್ಮಾಣವಾಗತಕ್ಕದ್ದು. ಧರ್ಮ ವಿರೋಧವಾದ ನೀತಿಯಿಂದ ರಾಷ್ಟ್ರಸಿದ್ಧಿಯಾಗುವುದಾದರೆ ಅದನ್ನು ಅನುಸರಿಸುವುದು ಆತನ ದೃಷ್ಟಿಯಲ್ಲಿ ಅಧರ್ಮವಲ್ಲ. ವ್ಯಾವಹಾರಿಕ

(36 ನೇ ಪುಟ ನೋಡಿ)

## ಗೃಹಲಕ್ಷ್ಮಿ

# ಶ್ರೀಮತೀ ಸ್ವಯಂವರ



ಪೂರ್ವದಲ್ಲಿ ಅಯೋಧ್ಯೆಯಲ್ಲಿ ನಾಭಾಗನೆಂಬ ಒಬ್ಬ ಮಹಾರಾಜನು ರಾಜ್ಯವಾಳುತ್ತಿದ್ದನು. ಇವನು ದೈವಭಕ್ತ, ಸತ್ಯವಂತ ಗುರು ಹಿರಿಯರಲ್ಲಿ ವಿಧೇಯನಾಗಿದ್ದನು. ಇವನ ಮಗನೇ ಅಂಬರೀಷ. ಇವನು ತನ್ನ ತಂದೆಯಂತೆಯೇ ಧರ್ಮಬುದ್ಧಿಯುಳ್ಳವನು, ದೇವರಲ್ಲಿ ಭಕ್ತಿಹೊಂದಿದ್ದನು.

ಇವನು ಗುರುಕುಲದಲ್ಲಿ ವಿದ್ಯಾಭ್ಯಾಸ ಮಾಡಿದ. ವಿದ್ಯೆಯನ್ನು ಕಲಿತು ವಿನಯ, ಗುರುಭಕ್ತಿ– ಇವುಗಳನ್ನೆಲ್ಲಾ ಹೊಂದಿದನು. ಮಹಾರಾಜನಾದ ಮೇಲೆ ಪ್ರಜೆಗಳನ್ನು ಧರ್ಮದಿಂದ ಪಾಲಿಸುತ್ತಿದ್ದನು. 'ಯಥಾ ರಾಜಾ ತಥಾ ಪ್ರಜಾ' ಎಂಬಂತೆ ಪ್ರಜೆಗಳೂ ರಾಜನನ್ನೇ ಅನುಕರಿಸುತ್ತಿದ್ದರು.

ಇವನಿಗೆ ಒಬ್ಬಳು ಮಗಳಿದ್ದಳು. ಅವಳ ಹೆಸರು ಶ್ರೀಮತಿ. ಶ್ರೀಮತಿ ವಯಸ್ಸಿಗೆ ಬಂದಳು. ಮದುವೆ ಮಾಡಬೇಕೆಂದು ರಾಜನು ಭಾವಿಸಿದನು. ಅವಳು ವಿದ್ಯಾವತಿ, ಸೌಂದರ್ಯವತಿ ಮತ್ತು ಗುರುಹಿರಿಯರಲ್ಲಿ ಭಕ್ತಿಗೌರವವನ್ನು ಹೊಂದಿದವಳಾಗಿದ್ದಳು.

ಒಮ್ಮೆ ನಾರದರು ಮತ್ತು ಪರ್ವತ ಮಹರ್ಷಿಗಳು ಅಂಬರೀಷನ ಅರಮನೆಗೆ ಬಂದರು. ಅವರನ್ನು ಅಂಬರೀಷನು ಭಕ್ತಿ ಗೌರವಗಳಿಂದ, ಆದರಿಸಿ ಸತ್ಕರಿಸಿದನು. ಇಬ್ಬರು ಋಷಿಗಳೂ ಶ್ರೀಮತಿಯನ್ನು ನೋಡಿದರು. ಅವಳ ರೂಪಲಾವಣ್ಯಕ್ಕೆ ಇಬ್ಬರೂ ಮಾರುಹೋದರು. ಇಬ್ಬರಿಗೂ ಅವಳನ್ನು ಮದುವೆ ಆಗಬೇಕೆಂಬ ಆಸೆಯಾಯಿತು. ಇಹಲೋಕದ ಎಲ್ಲಾ ಸುಖಗಳನ್ನೂ ತೊರೆದು ಕಾಡಿನಲ್ಲಿ ವಾಸಮಾಡಿಕೊಂಡು ತಪಸ್ಸು ಆಚರಿಸುವ ಇವರುಗಳಿಗೆ ಶ್ರೀಮತಿಯನ್ನು ಮದುವೆ ಆಗಬೇಕೆಂಬ ಆಸೆ ಆದುದು ಆಶ್ಚರ್ಯವೆ.

ಅವರು ಪ್ರತ್ಯೇಕ ಪ್ರತ್ಯೇಕವಾಗಿ ಅಂಬರೀಷನನ್ನು ಕಂಡು ಶ್ರೀಮತಿಯನ್ನು ತಮಗೇ ಕೊಟ್ಟು ವಿವಾಹ ಮಾಡಬೇಕೆಂದು ಕೇಳಿದರು.

ರಾಜನಿಗೆ ಯೋಚನೆಗಿಟ್ಟುಕೊಂಡಿತು. ಮಗಳು ರಾಜಕುಮಾರಿ, ಅರಮನೆಯಲ್ಲಿ ಸುಖವಾಗಿ ಬೆಳೆದವಳು. ಕಾಡಿನಲ್ಲಿ ತಪಸ್ವಿಗಳ ಜೊತೆ ಹೇಗೆ ಇದ್ದಾಳು? ಎಷ್ಟು ಕಷ್ಟಗಳನ್ನು ಅನುಭವಿಸಬೇಕಾಗುತ್ತದೊ? ಎಂದು ಯೋಚಿಸಿದನು. ಆಗ ಅವನು ಸ್ವಯಂವರ ಏರ್ಪಡಿಸಿ ಅವಳೇ ತೀರ್ಮಾನ ತೆಗೆದುಕೊಳ್ಳಲಿ ಎಂದುಕೊಂಡನು. ಇದೇ ವಿಷಯವನ್ನು ತಪಸ್ವಿಗಳಿಗೆ ತಿಳಿಸಿದನು. ಋಷಿಗಳು ಇದೇ ಸರಿಯೆಂದರು.

ಇಬ್ಬರೂ ಒಬ್ಬರಿಗೆ ತಿಳಿಯದಂತೆ ಮತ್ತೊಬ್ಬರು ವಿಷ್ಣುವಿನ ಬಳಿಗೆ ಹೋದರು.

ನಾರದರು ವಿಷ್ಣುವನ್ನು ಈ ರೀತಿ ಪ್ರಾರ್ಥಿಸಿದರು. 'ಸ್ವಾಮೀ, ನನಗೆ ಅಂಬರೀಷನ ಮಗಳು ಶ್ರೀಮತಿಯನ್ನು ಮದುವೆ ಆಗಲು ಬಹಳ ಇಷ್ಟವಾಗಿದೆ. ಆದರೆ ಪರ್ವತನೂ ಅವಳನ್ನೇ ಮದುವೆ ಆಗಲು ಇಷ್ಟ ಪಟ್ಟಿದ್ದಾನೆ. ಆದ್ದರಿಂದ ಅಂಬರೀಷನು ಸ್ವಯಂವರ ಏರ್ಪಡಿಸಿದ್ದಾನೆ. ಸ್ವಯಂವರದ ಕಾಲದಲ್ಲಿ ಪರ್ವತನ ಮುಖವು ಶ್ರೀಮತಿಗೆ ಕಪಿ ಮುಖದಂತೆ ಕಾಣಲಿ? ಅಂತೆಯೆ ಮಹಾವಿಷ್ಣುವು ನಸುನಕ್ಕು ನಾರದರಿಗೆ ಅದೇ ರೀತಿಯ ವರವನ್ನು ನೀಡಿದನು.

ನಾರದರು ಬಹಳ ಸಂತೋಷಗೊಂಡು ಇನ್ನು ಶ್ರೀಮತಿಯು ತಮಗೆ ದಕ್ಕಿದಳೆಂದೇ ಭಾವಿಸಿ ಹೊರಟು ಬಂದರು.

ಆದರೆ ಪರ್ವತರಿಗೆ ನಾರದರು ಶ್ರೀಮಹಾವಿಷ್ಣುವಿನ ಹತ್ತಿರ ಹೋಗಿ ವರ ಪಡೆದಿರುವುದು ತಿಳಿಯದು. ಅಂತೆಯೆ ಅವರು ಮಹಾವಿಷ್ಣುವನ್ನು ಈ ರೀತಿ ಪ್ರಾರ್ಥಿಸುತ್ತಾರೆ. 'ಸ್ವಾಮಿ, ನನಗೆ ಶ್ರೀಮತಿಯನ್ನು ಮದುವೆ ಆಗಲು ಇಷ್ಟವಾಗಿದೆ. ಆದರೆ ನಾರದರೂ ಅವಳನ್ನು ಮದುವೆ ಆಗಲು ಇಷ್ಟಪಟ್ಟಿದ್ದಾರೆ. ಆದ್ದರಿಂದ ಅಂಬರೀಷನು ಶ್ರೀಮತಿ ಸ್ವಯಂವರವನ್ನು ಏರ್ಪಡಿಸಿರುವನು. ಸ್ವಯಂವರದಲ್ಲಿ ನಾರದರ ಮುಖವು ಶ್ರೀಮತಿಗೆ ಕರಡಿಯ ಮುಖದಂತೆ ಕಾಣಲಿ. ಆಗ ಅವಳು ನನ್ನನ್ನೇ ವರಿಸುವಳು' ಎಂದು ಕೇಳಿದರು.

ಮಹಾವಿಷ್ಣುವು ನಸುನಗುತ್ತಾ ವರವನ್ನು ದಯಪಾಲಿಸಿದನು.

ಪರ್ವತರು ತಮ್ಮನ್ನೇ ಶ್ರೀಮತಿ ವರಿಸುವಳೆಂದುಕೊಂಡು ಬಹಳ ಸಂತೋಷದಿಂದ ಬಂದರು.

ಇಬ್ಬರೂ ದೊಡ್ಡ ತಪಸ್ವಿಗಳು ಎಂದು ನಸುನಕ್ಕು ವಿಷ್ಣುವು ಇಬ್ಬರಿಗೂ ಅವರುಗಳು ಕೇಳಿದ ವರಗಳನ್ನು ಅನುಗ್ರಹಿಸಿದನು.

ಅಂಬರೀಷ ಮಹಾರಾಜನು ಶ್ರೀಮತಿಯ ಸ್ವಯಂವರವನ್ನು ಏರ್ಪಡಿಸಿದನು. ಆದಿನ ನಾರದ ಮತ್ತು ಪರ್ವತ ಮಹರ್ಷಿಗಳಿಗೆ

**ಶ್ರೀಮತಿ ಬಿ. ಎಸ್. ವಿಜಯಮ್ಮ**

ಬಹಳ ಸಂಭ್ರಮ. ಇಬ್ಬರೂ ಸ್ವಯಂವರಕ್ಕೆ ಬಂದರು. ರಾಜನು ಮಗಳನ್ನು ಸ್ವಯಂವರಕ್ಕೆ ಕರೆತಂದನು. ಶ್ರೀಮತಿಯು ಪುಷ್ಪಮಾಲೆಯನ್ನು ಕೈಯಲ್ಲಿ ಹಿಡಿದು ಸರ್ವಾಭರಣಸುಂದರಿಯಾಗಿ ಬರುತ್ತಾಳೆ. ಅವಳಿಗೆ ಪರ್ವತರ ಮುಖವು ಕೋತಿಯಂತೆಯೂ, ನಾರದರ ಮುಖವು ಕರಡಿಯ ಮುಖದಂತೆಯೂ ಕಾಣುತ್ತದೆ. ಅವಳಿಗೆ ಭಯವಾಯಿತು. ಜೊತೆಗೆ ಅವರುಗಳನ್ನು ಹೇಗೆ ಮೆಚ್ಚುತ್ತಾಳೆ ಮತ್ತು ವರಿಸುತ್ತಾಳೆ. ರಾಜನಿಗೆ ಋಷಿಗಳ ಸ್ವರೂಪದಲ್ಲಿ ಏನೂ ವ್ಯತ್ಯಾಸ ಕಾಣಲಿಲ್ಲ.

ಆದರೆ ಶ್ರೀಮತಿಗೆ ಏನೂ ತೋಚದೆ ಶ್ರೀ ಮಹಾವಿಷ್ಣುವನ್ನು ಮನದಲ್ಲೇ ಧ್ಯಾನಿಸ ತೊಡಗಿದಳು.

ಅವಳ ಆಶ್ಚರ್ಯಕ್ಕೆ ಎಣೆಯೇ ಇಲ್ಲ. ನಾರದ ಮತ್ತು ಪರ್ವತ ಮಹರ್ಷಿಗಳ ನಡುವೆ ಭವ್ಯವಾದ ಸುಂದರವಾದ ತೇಜಸ್ವಿ ಮಹಾಪುರುಷನೊಬ್ಬನು ಕಾಣಿಸಿಕೊಂಡನು. ಅವನೇ ಶ್ರೀಮಹಾವಿಷ್ಣು. ಆದರೆ ಶ್ರೀಮತಿಗೆ ಇದು ತಿಳಿಯದು. 'ದೇವರ ಇಚ್ಛೆ ಇದ್ದಂತಾಗಲಿ' ಎಂದು ತನ್ನ ಕೈಯಲ್ಲಿದ್ದ ಹಾರವನ್ನು ಬೀಸಿದಳು. ಅದು ಆ ದಿವ್ಯ ಪುರುಷನ ಕೊರಳಿಗೆ ಬಿದ್ದಿತು. ವಿಷ್ಣುವು ಶ್ರೀಮತಿಯನ್ನು ವರಿಸಿ ಕರೆದುಕೊಂಡು ಮಾಯವಾದನು.

ಸ್ವತಃ ಜ್ಞಾನಿಗಳಾದ ಪರ್ವತ ಮತ್ತು ನಾರದರು ನಡೆದುದೆಲ್ಲವನ್ನೂ ಅರ್ಥಮಾಡಿಕೊಂಡು ನಾಚಿಕೆಗೊಂಡರು. ತಮ್ಮ ದುರಾಸೆಗೆ ತಕ್ಕ ಪ್ರತಿಫಲ ಸಿಕ್ಕಿದುದನ್ನು ಅರಿತರು. ಇದು ವಿಷ್ಣುವಿನ ಕೆಲಸವೇ ಎಂದು ಅರಿತು ಬಂದ ಆಪತ್ತನ್ನು ಮಹಾವಿಷ್ಣುವು ಹೇಗೆ ಪರಿಹರಿಸಿದನು ಎಂಬುದನ್ನು ತಿಳಿದ ಅಂಬರೀಷನು ವಿಷ್ಣುವನ್ನು ಸ್ತೋತ್ರ ಮಾಡಿದನು.

———

(34ನೇ ಪುಟದಿಂದ)

ವಿಚಾರಗಳಲ್ಲಿ ಧರ್ಮಕ್ಕೆ ಸಂಬಂಧಪಟ್ಟ ವಿಷಯಗಳನ್ನು ಕಾಲದೇಶಕ್ಕೆ ತಕ್ಕಂತೆ ಬದಲಾಯಿಸಿಕೊಳ್ಳಬೇಕು. ಮನುಷ್ಯನು ಕಾಲ ದೇಶ, ರೀತಿ ವರ್ತಮಾನಗಳಿಗೆ ಅಧೀನವಾಗಿರುವುದರಿಂದ ಅವನ ರೀತಿ ನೀತಿಗಳು ಅವನ ಸಂದರ್ಭಕ್ಕೆ ಅನುಗುಣವಾಗಿರುತ್ತವೆಯೇ ವಿನಾ ಯಾವಾಗಲೂ ಧರ್ಮಾನುಗುಣವಾಗಿರುವುದಿಲ್ಲ, ಆ ಸಂದರ್ಭದ ಅಧೀನದಲ್ಲಿ ಮಾಡುವ ಅಧರ್ಮಗಳು ಆ ಕಾಲಕ್ಕೆ ಧರ್ಮವೇ ಆಗಿರುತ್ತವೆ. ಆದುದರಿಂದ ಕೌಟಿಲ್ಯನ 'ಧರ್ಮಶಾಸ್ತ್ರ'ವು ಆ ಕಾಲದ ಆರ್ಥಿಕ ಮತ್ತು ರಾಜಕೀಯ ಪರಿಸ್ಥಿತಿಗಳಿಗೆ ಹೊಂದಿಕೊಂಡಿರುವ ಗ್ರಂಥ.

ಆದರೆ ಈ ಅಭಿಪ್ರಾಯವು ಮುಂದೆ ಬಂದ ಧರ್ಮಶಾಸ್ತ್ರಜ್ಞರಿಂದ ಖಂಡಿತವಾಯಿತು. ಅವರು ರಾಜತಂತ್ರಕ್ಕೂ ಧರ್ಮ ಜೀವನಕ್ಕೂ ಇರುವ ಪರಸ್ಪರ ಸಂಬಂಧವನ್ನು ತೀವ್ರವಾಗಿ ಸ್ಪಷ್ಟಪಡಿಸಿದರು. 'ಮಿತಾಕ್ಷರ'ದಲ್ಲಿ ವಿಜ್ಞಾನೇಶ್ವರನು ಅದನ್ನು ಈ ರೀತಿಯಲ್ಲಿ ಸಿದ್ಧಾಂತ ಮಾಡಿದ್ದಾನೆ. 'ಧರ್ಮಶಾಸ್ತ್ರ ಅಂತರ್ಗತಮೇವ ರಾಜ ನೀತಿ ಲಕ್ಷಣಂ ಅರ್ಥಶಾಸ್ತ್ರಂ' ಇತರ ಸ್ಮೃತಿಕಾರರೂ ಇದನ್ನು ಅನುಮೋದಿಸಿದರು.

ಯತ್ರ ವಿಪ್ರತಿಪತ್ತಿಸ್ಸ್ಯಾತ್
ಧರ್ಮ ಶಾಸ್ತ್ರಾರ್ಥ ಶಾಸ್ತ್ರಯೋಃ।
ಅರ್ಥ ಶಾಸ್ತ್ರೋಕ್ತ ಮುತ್ಸೃಜ್ಯ
ಧರ್ಮ ಶಾಸ್ತ್ರೋಕ್ತ ಮಾಚರೇತ್॥

—ಎಂದು ಘೋಷಿಸಿದರು. ಇದರಿಂದ ಮುಂದೆ ಕೌಟಿಲ್ಯನ ಅಭಿಪ್ರಾಯಕ್ಕೆ ಅಷ್ಟು ಪ್ರಾಶಸ್ತ್ಯ ಬರಲಿಲ್ಲ. ಆದರೂ ಅಲ್ಲಿ ಪ್ರತಿಪಾದಿತವಾಗಿರುವ ಪ್ರತಿಭಾಯುಕ್ತವಾದ ರಾಜನೀತಿಗೆ ಸಂಬಂಧಪಟ್ಟ ತತ್ತ್ವಕಲ್ಪನೆ ಅದನ್ನು ಆಚರಿಸುವ ಸುವ್ಯವಸ್ಥೆ ಅದರ ಗುರಿಯಾದ ಸಮಾಜ ಸೌಖ್ಯಸಾಧನೆ। — ಇವು ಎಂದೆಂದಿಗೂ ಆದರ್ಶವಾಗಿ ಕಾಲದೇಶ ವರ್ತಮಾನಗಳ ಪ್ರಭಾವಕ್ಕೊಳಗಾಗದೆ ಚಿರಸ್ಥಾಯಿಗಳಾಗಿರತಕ್ಕವು.

★

# ಶ್ರೀ ವೆಂಕಟೇಶ್ವರಸ್ವಾಮಿದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ದತ್ತಿಯನ್ನು ನೀಡ ಬಯಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಇತ್ತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಅರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿ ಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ;

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟ್ ಅನ್ನು ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ: 3 ಲಕ್ಷ. ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಅರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ
(2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದುಬಾರಿಗೆ 10% ದಂತೆ). ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ

ಬರೆಯಿರಿ:

**ಕಾರ್ಯನಿರ್ವಹಣಾಧಿಕಾರಿ**

ತಿ. ತಿ. ದೇ. ತಿರುಪತಿ.

# ವಾರ್ತಾಲಹರಿ

## ತಿರುಪತಿಯಲ್ಲಿ ಕಂಚಿ ಪೀಠಾಧಿಪತಿ

ಕಂಚಿ ಕಾಮಕೋಟಿ ಪೀಠಾಧಿಪತಿ ಶ್ರೀ ಶ್ರೀ ಜಯೇಂದ್ರ ಸರಸ್ವತಿ ಸ್ವಾಮೀಗಳವರು ಏಪ್ರಿಲ್ 16 ರಂದು ತಿರುಪತಿಗೆ ಆಗಮಿಸಿ 17, 18, 19, ರಂದು ತಿರುಮಲೆಯಲ್ಲಿ ಶ್ರೀ ವೆಂಕಟೇಶ್ವರ ಸ್ವಾಮಿಯನ್ನು ಆರಾಧಿಸಿದರು.

ಹದಿನಾರರ ಬೆಳಗ್ಗೆ ತಿರುಪತಿಯ ಶ್ರೀಗೋವಿಂದರಾಜಸ್ವಾಮಿ ದೇವಾಲಯದ ಎದುರಿಗೆ ಅವರನ್ನು ಪುರ ಪ್ರಮುಖರು ಎದುರುಗೊಂಡು ಅನ್ನಮಾಚಾರ್ಯ ಕಲಾಮಂದಿರದತ್ತ ಕರೆದು ಕೊಂಡು ಬಂದರು. ಅಂದು ಸಂಜೆ ಕಾಲುಹಾದಿಯಲ್ಲಿ ತಿರುಮಲೆಯನ್ನು ಸೇರಿದ ಸ್ವಾಮಿಗಳು ಮೂರುದಿನ ತಿರುಮಲೇಶನನ್ನು ಸೇವಿಸಿ ನಂತರ ತಿರುಚಾನೂರು ಶ್ರೀ ಪದ್ಮಾವತಿಯನ್ನೂ ಆರಾಧಿಸಿದರು.

## ಮೆಟ್ಲೋತ್ಸವ

ತಮಿಳುನಾಡಿಗೆ ಸೇರಿದ ವಿವಿಧ ಭಕ್ತವೃಂದಗಳು ತಮಿಳು ಉಗಾದಿಯ ದಿನ ತಿರುಮಲೇಶನ ಮೆಟ್ಟಿಲು ಉತ್ಸವವನ್ನು ವೈಭವದಿಂದ ಆಚರಿಸಿದವು. ಅಲಿಪಿರಿಯಿಂದ ತಿರುಮಲೆಯವರೆಗಣ ಮೆಟ್ಟಿಲುಗಳನ್ನು ಈ ಸಮೂಹಗಳು ಪೂಜಿಸುತ್ತ, ಭಜನೆಕೀರ್ತನೆಗಳನ್ನು ಹೇಳಿಕೊಳ್ಳುತ್ತ, ತಿರುಮಲೆಯನ್ನು ತಲುಪಿದವು. ಮೊದಲ ಹತ್ತು ಮೆಟ್ಟಿಲುಗಳ ಮೇಲೆ ಹತ್ತು ಭಜನೆನಡೆಸಿ ನಂತರ ಸಾಮೂಹಿಕ ಭಜನೆಯಲ್ಲಿ ಎಲ್ಲರೂ ಮುಂದುವರೆದ ಈ ಉತ್ಸವವನ್ನು ಅಲಿಪಿರಿಯ ಬಳಿ ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್ ಲಕ್ಷ್ಮೀನಾರಾಯಣ ಆರಂಭಿಸಿದರು.

## ತಮಿಳು ಉಗಾದಿ

ತಮಿಳು ಉಗಾದಿಯ ಸಂದರ್ಭದಲ್ಲಿ ತಿರುಮಲೆಯಲ್ಲಿ 50 ಸಾವಿರಕ್ಕೂ ಮೀರಿದ ಸಂಖ್ಯೆಯಲ್ಲಿ ಭಕ್ತರು ಶ್ರೀವೆಂಕಟೇಶ್ವರಸ್ವಾಮಿಯನ್ನು ಸಂದರ್ಶಿಸಿದರು. ಸುಮಾರು 20 ಸಾವಿರ ಮಂದಿ ತಲೆಗೂದಲನ್ನು ಕಲ್ಯಾಣಕಟ್ಟೆಯಲ್ಲಿ ಸಮರ್ಪಿಸಿದರು. ಅಂದು ತಿರುಮಲೆಯ ಹುಂಡಿ ಆದಾಯ ರೂ. ನಾಲ್ಕು ಲಕ್ಷ ಎಂಭತ್ತು ಸಾವಿರ ವೆಂದೂ, ಲಾಡುವಡೆ ಮಾರಾಟ ದಿಂದ ಮೂರೂವರೆ ಲಕ್ಷ ಆದಾಯವೆಂದೂ ವರದಿಯಾಗಿದೆ.

## ತಿರುಪತಿಗೆ ಉತ್ತರದಿಂದ ಹೆಚ್ಚಿನ ಸಂದಣಿ

ಉತ್ತರ ಭಾರತದಿಂದ ವಿಶೇಷವಾಗಿ ದೆಹಲಿಯಿಂದ ತಿರುಪತಿಗೆ ಬರುವ ಯಾತ್ರಿಕರ ಸಂಖ್ಯೆ ಹೆಚ್ಚಾಗುತ್ತಿದೆಯೆಂದು ತಿಳಿದು ಬಂದಿದೆ. ಈ ಕಾರಣದಿಂದಾಗಿ ರಾಜ್ಯ ಸರ್ಕಾರವು ಇಂಡಿಯಾ ಗೇಟ್ ಸಮೀಪದ ಆಂಧ್ರಪ್ರದೇಶ ಭವನದ ಬಳಿಯಲ್ಲಿ ಒಂದು ರಿಸರ್ವೇಶನ್ ಕೌಂಟರನ್ನು ತೆರೆದು ತಿರುಮಲೆಯ ವಸತಿಸೌಕರ್ಯ, ತಿರುಪತಿಯಿಂದ ತಿರುಮಲೆಗೆ ವಾಹನ ಸೌಕರ್ಯ – ಮೊದಲಾದುವನ್ನು ಮೊದಲೇ ರಿಸರ್ವ್ ಮಾಡಿಸಲು ಯಾತ್ರಿಕರಿಗೆ ಅವಕಾಶ ನೀಡಿದೆ. ಈ ಕೌಂಟರಿನಲ್ಲಿ ತಿ. ತಿ. ದೇ. ಪ್ರಕಟನೆಗಳನ್ನೂ ಕ್ಯಾಸೆಟ್‌ಗಳನ್ನೂ ಮಾರುವ ಏರ್ಪಾಡುಗಳೂ ನಡೆಯುತ್ತಿವೆ. ದೆಹಲಿಯ ಹತ್ತು ಲಕ್ಷ ಮಂದಿ ದಕ್ಷಿಣ ಭಾರತೀಯರಲ್ಲಿ ಬಹುಮಂದಿ ವರ್ಷಕೊಮ್ಮೆ ತಿರುಮಲೆಯ ಯಾತ್ರೆ ಮಾಡುವವರಿದ್ದು, ಈಚೆಗೆ ಹೆಚ್ಚು ಹೆಚ್ಚು ಮಂದಿ ಔತ್ತರೇಯರು ದಕ್ಷಿಣದತ್ತ ಆಕರ್ಷಿತರಾಗುತ್ತಿದ್ದಾರೆ. ವಿಧರ್ಮೀಯರೂ ಸಾಕಷ್ಟು ಮಂದಿ ತಿರುಮಲೆಯನ್ನು ಸಂದರ್ಶಿಸುತ್ತಿದ್ದಾರೆ. (ಶ್ರೀ ವೆಂಕಟೇಶ್ವರಸ್ವಾಮಿಯನ್ನು ನಂಬುವೆವೆಂಬ ಘೋಷಣೆಗೆ ಸಹಿಹಾಕುವುದರಿಂದ ಅವರಿಗೆ ಸ್ವಾಮಿಯ ದರ್ಶನಕ್ಕೆ ಅವಕಾಶ ನೀಡಲಾಗುತ್ತದೆ.)

## ತಿರುಪತಿಯಲ್ಲಿ ಆಯುರ್ವೇದ ಆಸ್ಪತ್ರೆ

ತಿರುಪತಿಯ ಆಯುರ್ವೇದ ಕಲಾಶಾಲೆಗೆ ಅನುಬಂಧವಾದ ಮೂವತ್ತು ಹಾಸಿಗೆಗಳ ಆಸ್ಪತ್ರೆಯನ್ನು ಆಂಧ್ರಪ್ರದೇಶದ ಆರೋಗ್ಯ ಶಾಖಾ ಕಾರ್ಯದರ್ಶಿ ಶ್ರೀ ಎಸ್. ವಿ. ಗಿರಿಯವರು ಈಚೆಗೆ ಉದ್ಘಾಟಿಸಿದರು.

ಆಯುರ್ವೇದದಲ್ಲಿ ಶಿಕ್ಷಣ ಹೊಂದಿದ ವೈದ್ಯರು ಗ್ರಾಮಾಂತರ ಪ್ರದೇಶಗಳಲ್ಲಿ ಹೆಚ್ಚು ಹೆಚ್ಚಿಗೆ ಕೆಲಸ ಮಾಡಬೇಕೆಂದೂ ಶ್ರೀ ಎಸ್. ವಿ. ಗಿರಿ ಕರೆ ನೀಡಿದರು.

ತಿರುಪತಿಯ ಆಯುರ್ವೇದ ಕಲಾಶಾಲೆಗೆ ಆರ್ಥಿಕ ನೆರವನ್ನು ನೀಡಲು ತಿ. ತಿ. ದೇ. ಸಿದ್ಧವೆಂದು ಹೇಳುತ್ತ ತಮ್ಮ ಅಧ್ಯಕ್ಷ ಭಾಷಣದಲ್ಲಿ ಶ್ರೀ ಎಸ್. ಲಕ್ಷ್ಮೀನಾರಾಯಣ ಅವರು, ರಾಜ್ಯ ಸರ್ಕಾರ ತಕ್ಕ ಸಾಂಕೇತಿಕ ಸಲಹೆಗಳನ್ನು ನೀಡಿದಲ್ಲಿ, ತಿರುಪತಿಯ ಈ ಆಯುರ್ವೇದ ಕಲಾಶಾಲೆಯನ್ನು ದೇಶದ ಅತ್ಯುತ್ತಮ ಕಲಾಶಾಲೆಯಾಗಿ ತಿದ್ದಬಹುದು ಎಂದೂ ತಿಳಿಸಿದರು.

ತಿ. ತಿ. ದೇ. ವಿದ್ಯಾಶಾಖಾಧಿಕಾರಿ ಶ್ರೀ ಚಂದ್ರಶೇಖರ ನಾಯುಡು ಅವರು ಸ್ವಾಗತಿಸಿದ ಸಭೆಯಲ್ಲಿ ಡಾ॥ ಸುಗಾರಾ ಬೇಗಂ, ಮಾಜಿ ಪುರಸಭಾಸದಸ್ಯ ಶ್ರೀ ನರಸಿಂಹ ಮೂರ್ತಿ ಅವರೂ ಮಾತನಾಡಿದರು.

## ತಿರುಪತಿ ತಿರುಮಲೆಯಲ್ಲಿ ಮುಖ್ಯಮಂತ್ರಿ

ಏಪ್ರಿಲ್ 6 ನೆಯ ದಿನದಂದು ತಿರುಪತಿಗೆ ಆಗಮಿಸಿದ ಆಂಧ್ರ ಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮರಾಯರು ಹಲವಾರು ಯಾತ್ರಿಕ ನಾಗರಿಕ, ಮಾನವೋಪಯೋಗಿ ಕಾರ್ಯಕ್ರಮಗಳಿಗೆ ಆರಂಭೋತ್ಸವವನ್ನು ನಡೆಸಿ ಕೊಟ್ಟರು. ತಿರುಪತಿ ಅಲಿಪಿರಿಗಳ ಬಳಸುರಸ್ತೆ, ಬೆಟ್ಟದ ಮೇಲೆ ಅಶ್ವಿನಿ ಆಸ್ಪತ್ರೆಯಲ್ಲಿ ರಕ್ತನಿಧಿ, ಹೊಸ ಕಲ್ಯಾಣ ಕಟ್ಟೆ, ಹೊಸ ಸರತಿಯಸಾಲಿನ ಕ್ಯೂ ಕಾಂಪ್ಲೆಕ್ಸ್, ಯಾತ್ರಿಕರ ನಿತ್ಯ ಅನ್ನದಾನಯೋಜನೆ ಹಾಗೂ ತಿರುಪತಿಯ ಬಾಲಾಜಿ ವಿಕಲಾಂಗ ಸಂಕ್ಷೇಮ ಕೇಂದ್ರಗಳನ್ನು ಅಂದು ತಿ. ತಿ. ದೇ. ಗಳು ಆರಂಭಿಸಿದವು.

ರೇಣಿಗುಂಟ ತಿರುಪತಿ ರಸ್ತೆಯಲ್ಲಿ ತಿರುಪತಿಯ ಬಸ್ ನಿಲ್ದಾಣದಿಂದ ಅಲಿಪಿರಿಯನ್ನು ಸೇರುವ ಬೆಟ್ಟದ ಬಳಸುರಸ್ತೆ ಮೂರು ಕಿಲೋಮೀಟರಿಗೂ ಹೆಚ್ಚು ಉದ್ದವಿದ್ದು, ಏಳು ಮೀಟರ್ ಅಗಲದ ತಾರು ರಸ್ತೆಯನ್ನು ಹೊಂದಿದೆ. ಏಕ ಕಾಲದಲ್ಲಿ ದ್ವಿಮುಖ ಸಂಚಾರಕ್ಕೆ ಅವಕಾಶ ಕಲ್ಪಿಸುವ ಈ ರಸ್ತೆಯ ಬೀದಿದೀಪಗಳ ವ್ಯವಸ್ಥೆಯನ್ನೂ ಮಾಡಲಾಗಿದೆ. ಒಟ್ಟು 58 ಲಕ್ಷರೂಗಳ ವೆಚ್ಚದಲ್ಲಿ ತಯಾರಾದ ಈ ಬಳಸು ರಸ್ತೆಯ ಕೆಲಸ ಮೊದಲಿಗೆ ರಸ್ತೆ ಹಾಗೂ ಭವನಗಳ ಇಲಾಖೆ ಕೈಗೆತ್ತಿಕೊಂಡು ನಂತರ ತಿ. ತಿ. ದೇ ಗಳಿಗೆ ಒಪ್ಪಿಸಿತು. ಅತಿಶೀಘ್ರದಲ್ಲಿ ತಿ. ತಿ. ದೇ. ಗಳಿಂದ ಮುಕ್ತಾಯ ಹೊಂದಿದ ಈ ರಸ್ತೆಯಿಂದ ತಿರುಪತಿಯ ಬೀದಿಗ

ಳಲ್ಲಿ ವಾಹನಗಳ ಸಂದಣಿ ಕಡಮೆಯಾಗಿ ಓಡಾಟವು ಸುಲಭವಾಗುವುದೆಂದು ಹೇಳಲಾಗಿದೆ.

ಬೆಟ್ಟದ ಮೇಲೆ ತಿ. ತಿ. ದೇ. ಗಳ ಅಶ್ವಿನಿ ಆಸ್ಪತ್ರೆಯಿರುವುದು ಸರಿಯಷ್ಟೆ. ತಿ. ತಿ. ದೇ. ಗಳ ಸ್ವರ್ಣೋತ್ಸವಗಳಲ್ಲಿ ಮುಖ್ಯಮಂತ್ರಿಗಳು ನೀಡಿದ ಸಲಹೆಯಂತೆ ಅಲ್ಲಿ ಒಂದು ರಕ್ತನಿಧಿ ಕೇಂದ್ರವನ್ನು ಸ್ಥಾಪಿಸುವ ಯೋಜನೆಯನ್ನು ಕೈಗೆತ್ತಿಕೊಳ್ಳಲಾಯಿತು. ಈಗ ಆರಂಭಿಸಲಾಗಿರುವ ರಕ್ತನಿಧಿ ಕೇಂದ್ರ ಮೂರು ಹಂತಗಳಲ್ಲಿ ಕೆಲಸಮಾಡುವುದು. ಮೊದಲನೆಯದು ಬೆಟ್ಟದ ಮೇಲಿನ ಅಶ್ವಿನಿ ಆಸ್ಪತ್ರೆಯ ರಕ್ತ ಸಂಗ್ರಹಣೆ. ಬೆಟ್ಟದ ಮೇಲೆ ಕೇಂದ್ರ ಸ್ವಾಗತ ಕಚೇರಿ, ಕ್ಯೂ ಷೆಡ್‌ಗಳು, ಕೊಲುವು ಮಂಟಪ ಮುಂತಾದೆಡೆಗಳಲ್ಲಿ ರಕ್ತದಾನ ಮಾಡಲು ನೊಂದಾವಣೆ ನಡೆಯುವುದು. ಅಶ್ವಿನಿ ಆಸ್ಪತ್ರೆಯಲ್ಲಿ ಸಂಗ್ರಹವಾದ ವಿವಿಧ ರೀತಿಯ ರಕ್ತವನ್ನು ತಿರುಪತಿಯ ಕೇಂದ್ರ ಆಸ್ಪತ್ರೆಯಲ್ಲಿ ಸೂಕ್ತವಾದ ರೀತಿಯಲ್ಲಿ ಸಂರಕ್ಷಿಸಿಡಲಾಗುವುದು. ಇಲ್ಲಿಂದ ಬೇರೆ ಬೇರೆ ಆಸ್ಪತ್ರೆಗಳಿಗೆ ಅಗತ್ಯಬಿದ್ದಂತೆ ಕಳುಹಿಸಿಕೊಡಲಾಗುವುದು. ಒಟ್ಟು 7. 5 ಲಕ್ಷರೂಗಳ ಕಟ್ಟಡ, ಸಾಮಾಗ್ರಿ ವೆಚ್ಚ ಹಾಗೂ 2. 5 ಲಕ್ಷರೂಗಳ ವಾರ್ಷಿಕ ವೆಚ್ಚದ ಈ ರಕ್ತನಿಧಿ ಕೇಂದ್ರ ಮಾನವ ಸೇವೆಗಳಲ್ಲಿ ಒಂದು ಎಂದು ಪರಿಗಣಿತವಾಗಿದೆ.

ತಿರುಮಲೆಯಲ್ಲಿ ದಿನೇ ದಿನೇ ಯಾತ್ರಿಕರ ಸಂದಣಿ ಹೆಚ್ಚುತ್ತಿದ್ದು ಅದರ ಪ್ರಮಾಣದಲ್ಲಿಯೇ ತಲೆಗೂದಲನ್ನು ಸಮರ್ಪಿಸುವವರ ಸಂಖ್ಯೆಯೂ ಅಧಿಕವಾಗುತ್ತಿದೆ. ಈಗ ಇರುವ ಎಲ್ಲ ಕಲ್ಯಾಣ ಕಟ್ಟೆಗಳನ್ನೂ ಸೇರಿಸಿದರೆ ಒಟ್ಟಿಗೆ 300 ಮಂದಿ ತಲೆಗೂದಲನ್ನು ನೀಡಲು ಸಾಧ್ಯ. ಇದು ಬಹು ಕಡಮೆಯೆಂದು ತೀರ್ಮಾನಿಸಲಾಗಿದ್ದು ಎರಡು ಅಂತಸ್ತುಗಳ ಹೊಸ ಕಲ್ಯಾಣ ಕಟ್ಟೆಯನ್ನು ನಿರ್ಮಿಲಾಗಿದೆ. 30 ಲಕ್ಷರೂಗಳ ವೆಚ್ಚದಲ್ಲಿ ನಿರ್ಮಾಣವಾಗಿರುವ ಹೊಸ ಕಲ್ಯಾಣಕಟ್ಟೆಯಲ್ಲಿ ಕಾಯುವ ಕೋಣೆಗಳು, ಕೇಶಸಂಗ್ರಹಾಗಾರ, ಶೌಚಗೃಹ ಸ್ನಾನಗೃಹ ಮೊದಲಾದ ಎಲ್ಲ ಅಗತ್ಯಗಳೂ ಇದ್ದು ಏಕ ಕಾಲದಲ್ಲಿ ಐದುನೂರು ಮಂದಿಗೆ ಕೇಶ ಖಂಡನಾವಕಾಶವಾಗಿ, ಅವರುಗಳ ಸ್ನಾನಕ್ಕೆ ಸೌರ ಶಕ್ತಿಯಿಂದ ಕಾಯಿಸಿದ ನೀರನ್ನು ಒದಗಿಸಲಾಗುತ್ತದೆ.

ದಿನೇ ದಿನೇ ಹೆಚ್ಚುತ್ತಿರುವ ಯಾತ್ರಿಕರು ಶ್ರೀವೆಂಕಟೇಶ್ವರಸ್ವಾಮಿ ದರ್ಶನಕ್ಕಾಗಿ ಸರತಿಯ ಸಾಲಿನ ಕೋಣೆಗಳಲ್ಲಿ ಕಾಯಬೇಕಿತ್ತು. ಹೊಸ ಕ್ಯೂ ಕಾಂಪ್ಲೆಕ್ಸ್ ( ವೈಕುಂಠ ) ನಿರ್ಮಾಣದಿಂದಾಗಿ ಈ ಕಾಯುವಿಕೆಯನ್ನೂ ಒಂದು ಆನಂದಕರವಾದ ಅನುಭವವೆನ್ನಿಸುವಂತೆ ಮಾಡಲು ಪ್ರಯತ್ನಪಡಲಾಗಿದೆ. ಸುಮಾರು ಮೂರು ಕೋಟಿ ರೂಗಳ ವೆಚ್ಚದಲ್ಲಿ ನಿರ್ಮಾಣವಾಗಿರುವ ಈ ಕ್ಯೂ ಕಾಂಪ್ಲೆಕ್ಸ್ ಅರ್ಧ ವೃತ್ತಾಕಾರದಲ್ಲಿದ್ದು ಎರಡು ಅಂತಸ್ತುಗಳಿವೆ. ಒಂದೊಂದು ಅಂತಸ್ತಿನಲ್ಲಿಯು 17 ಕೋಣೆಗಳಿದ್ದು ಪ್ರತಿಕೋಣೆಯೊಳ್ಳೂ ಸುಮಾರು 450 ಮಂದಿ ಕೂಡಬಹುದು, ಎಂದರೆ ಸುಮಾರು 16,500 ಮಂದಿ ಇಲ್ಲಿಕುಳಿತು ಕೊಳ್ಳಬಹುದು. ಪ್ರತಿಕೋಣೆಯೂ ಶೌಚಗೃಹ, ಸ್ನಾನಗೃಹಗಳನ್ನೂ ಹೊಂದಿದ್ದು, ಯಾತ್ರಿಕರಿಗೆ ಆಹಾರ ಪೊಟ್ಟಣಗಳ ಮಾರಾಟದ ಏರ್ಪಾಡೂ ಇದ್ದು, ಇಲ್ಲಿ ಕಾಯುವುದೂ ಒಂದು ಸುಖಕರವಾದ ಅನುಭವ ಎನ್ನುವಂತಾಗಿದೆ.

ತಿರುಪತಿಗೆ ಶ್ರೀವೆಂಕಟೇಶ್ವರಸ್ವಾಮಿಯನ್ನು ದರ್ಶಿಸಬರುವ ಯಾತ್ರಿಕರ ಸೌಲಭ್ಯಗಳಲ್ಲಿ ಮೂಲಭೂತವಾದದ್ದು ಆಹಾರದ ಸಮಸ್ಯೆ. ಅದನ್ನು ನಿವಾರಿಸಲು ತಿ.ತಿ.ದೇ.ಗಳು ನಿತ್ಯ ಅನ್ನದಾನ ಯೋಜನೆಯನ್ನು ಆರಂಭಿಸಿದ್ದು, ಇದು ತಿ.ತಿ.ದೇ. ಕ್ಯಾಂಟೀನ್ ಮೇಲುಭಾಗದಲ್ಲಿ ಕೆಲಸ ಮಾಡುತ್ತಿದೆ. ಯಾವದಾನಿಗಳಾದರೂ, ರೂ 10 ಲಕ್ಷದತ್ತಿ ನೀಡಿದಲ್ಲಿ ಅದಕ್ಕೆ ಸಮವಾದ ದತ್ತಿಯನ್ನು ತಿ.ತಿ.ದೇ.ಗಳು ನೀಡಿ ಒಂದು ಶಾಶ್ವತ ನಿಧಿಯನ್ನು ಸ್ಥಾಪಿಸಿ, ಅದರ ಬಡ್ಡಿಯ ಮೂಲಕ ದಿನವೊಂದಕ್ಕೆ ಐದುನೂರುಮಂದಿಗೆ ಉಚಿತ ಭೋಜನ ನೀಡಲಾಗುವುದು. (ಇದರ ವಿವರಗಳನ್ನು ಕೆಳಗೆ ನೀಡಲಾಗಿದೆ.)

ತಿರುಪತಿಯ ಬಾಲಾಜಿ ವಿಕಲಾಂಗ ಸಂಕ್ಷೇಮ ಕೇಂದ್ರ ವಿಕಲಾಂಗರ ಬಗ್ಗೆ ತಿ. ತಿ. ದೇ. ಗಳಿಗಿರುವ ಕಳಕಳಿಯ ಕುರುಹು. ಇಲ್ಲಿ ಶಸ್ತ್ರಚಿಕಿತ್ಸೆಯ ಮೂಲಕ ವಿಕಲಾಂಗರ ಊನವನ್ನು ಸರಿಪಡಿಸಲು ಪ್ರಯತ್ನಿಸಲಾಗುವುದು. ಅವರುಗಳ ಪ್ರತಿಭೆ, ಅಗತ್ಯ, ಅವಕಾಶಗಳಿಗೆ ತಕ್ಕಂತೆ ಅವರಿಗೆ ಜೀವನೋಪಯೋಗಿ ವಿದ್ಯೆ, ಕಸುಬು, ಕಲೆಗಳನ್ನು ಕಲಿಸಲಾಗುವುದು. ಅಂತಹ ಕಲೆ, ಕಸುಬುಗಳಿಗೆ ಅವಕಾಶ ಕಲ್ಪಿಸಲಾಗುವುದು.

ಡಾ॥ ವ್ಯಾಘ್ರೇಶ್ವರುಡು ಅವರು ನಿರ್ದೇಶಕರಾಗಿರುವ ಈ ಸಂಕ್ಷೇಮಕೇಂದ್ರವು ತನ್ನ ಪರಿಧಿಯಲ್ಲಿ, ಈಗಾಗಲೇ ಕೆಲಸಮಾಡುತ್ತಿರುವ ಮೂಗ ಬಧಿರಾಂಧ ಪಾಠಶಾಲೆ, ಎಸ್. ವಿ. ತರಬೇತಿ ಉತ್ಪಾದನಾಶಾಲೆ, ಕೃತಕ ಅವಯವ ಕೇಂದ್ರ ಮೊದಲಾದುವನ್ನು ಒಳಗೊಳ್ಳುತ್ತದೆ.

ಇವೆಲ್ಲವನ್ನೂ ಉದ್ಘಾಟಿಸಿದ ಆಂಧ್ರ ಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮರಾಯರು ನಂತರದ ಬಹಿರಂಗ ಸಭೆಯಲ್ಲಿ ಮಾತನಾಡುತ್ತ 'ಶ್ರೀವೆಂಕಟೇಶ್ವರಸ್ವಾಮಿಯ ಅನುಗ್ರಹ

## ಅನ್ನದಾನ ಯೋಜನೆ ವಿವರಗಳು

"ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ" ಎನ್ನುವ ಹೊಸ ಯೋಜನೆಯಲ್ಲಿ ತಿರುಮಲೆಗೆ ಬರುವ ಯಾತ್ರಿಕರಿಗಾಗಿ ಉಚಿತ ಭೋಜನ ನೀಡುವ ಕಾರ್ಯವನ್ನು ತಿ. ತಿ. ದೇ. ಆರಂಭಿಸಿವೆ. ಈ ಯೋಜನೆಯ ವಿವರಗಳು ಈ ರೀತಿ ಇವೆ. ಯಾವ ಭಕ್ತರೇ ಆಗಲಿ ಹತ್ತು ಲಕ್ಷ ರೂಗಳನ್ನು ದಾನ ನೀಡಿದಲ್ಲಿ ಅದಕ್ಕೆ ಸಮನಾದ ಅನುದಾನವನ್ನು ತಿ. ತಿ. ದೇ. ಗಳೂ ನೀಡಿ ಒಂದು ದತ್ತಿಯನ್ನು ಸ್ಥಾಪಿಸಿ, ಅದರ ವಾರ್ಷಿಕಬಡ್ಡಿ ಉತ್ಪನ್ನದಿಂದ ದಿನವೂ ಐದುನೂರು ಮಂದಿಗೆ ಉಚಿತ ಭೋಜನ ನೀಡಲಾಗುವುದು. ಈ ದಾನವು ಆದಾಯಕರ ಶಾಸನದ ಯು/ಎಸ್ ೮0 (ಜಿ) ಕಲಮಿನಂತೆ ಆದಾಯಕರ ವಿಮುಕ್ತವಾಗಿರುವುದು.

ದಾನಿಯ ಹೆಸರನ್ನು ಊಟದ ಕೊಠಡಿಯಲ್ಲಿ ಎದ್ದು ಕಾಣುವಂತೆ ಕಪ್ಪು ಹಲಗೆಯ ಮೇಲೆ ಬರೆಯಲಾಗುವುದು. ಹಾಗೂ ಉಚಿತ ಭೋಜನದ ಚೀಟಿಗಳ ಮೇಲೂ ಮುದ್ರಿಸಲಾಗುವುದು. ಜೊತೆಗೆ ವರ್ಷಕ್ಕೊಮ್ಮೆ ಮೂರು ದಿನಗಳ ಕಾಲ ದಾನಿ ಮತ್ತು ಅವರ ಕುಟುಂಬಕ್ಕೆ ತಿರುಮಲೆಯಲ್ಲಿ ಉಚಿತ ವಸತಿ ಹಾಗೂ ಮೂರು ದಿನವೂ ದೇವಾಲಯದಲ್ಲಿ ಆರತಿಯೊಡನೆ ದರ್ಶನಾವಕಾಶವನ್ನು ಏರ್ಪಡಿಸಲಾಗುವುದು.

ದೇಶದೊಳಗಿನ ಹಾಗೂ ವಿದೇಶಗಳ ಎಲ್ಲಾ ಮಾನವಸೇವಾ ಪ್ರೇಮಿ ಭಕ್ತರೂ ತಿ ತಿ.ದೇ. ಗಳ ಈ ಯೋಜನೆಗೆ ಉದಾರವಾಗಿ ದಾನ ನೀಡುವುದರಿಂದ ಅತಿ ಹೆಚ್ಚು ಮಂದಿ ಯಾತ್ರಿಕರಿಗೆ ಭೋಜನಾವಕಾಶವುಂಟುಮಾಡಿ, ಅವರು ತಿರುಮಲೆಯಲ್ಲಿ ಅಶನ ಚಿಂತಾತುರರಾಗುವುದನ್ನು ತಪ್ಪಿಸಬೇಕೆಂದು ಈ ಮೂಲಕ ಬೇಡಲಾಗಿದೆ.

## ಮುಂದಿನ ಸಂಚಿಕೆಯಲ್ಲಿ .... .... ....

### ಸಪ್ತಗಿರಿ ಜುಲೈ — 1985

**ಪ್ರದಕ್ಷಿಣೆಯ ರಹಸ್ಯ** — ಗುರುನಾಥ ಇನಾಮದಾರ

**ಶ್ರೀ ಯಾಮುನರ ಸ್ತೋತ್ರರತ್ನ** — ಕಂದಾಡೈ ಕೇಶವನ್

**ವಾನರ ಸಂಖ್ಯಾ ವಿವರ** — ಡಾ॥ ಎಸ್. ಅನಂತರಂಗಾಚಾರ್

**ವಿದ್ಯೆ ಮತ್ತು ವಿನಯ** — ಪಿ. ಎಸ್. ಮಂಜುನಾಥ

**ಶ್ರೀ ಪಾದರಾಜರು ಚಿತ್ರಿಸಿದ ಬಾಲಕೃಷ್ಣ**
— ವಾಸುದೇವ ಅಗ್ನಿಹೋತ್ರಿ

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ: ರೂ. 1-00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12-00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದಲ್ಲೂ ಬರೆಯಬೇಕು. ಬರೆಯಿರಿ — ವೆಲ್‌ಫೇರ್ ಆಫೀಸರ್ ಸೇಲ್ಸ್‌ವಿಂಗ್. ತಿ.ತಿ.ದೇ. ತಿರುಪತಿ.

## ತಿಂಗಳಿನ ಮುಖ್ಯದಿನಗಳು

### ಜುಲೈ 1985

| | | |
|---|---|---|
| 2 | ಮಂಗಳವಾರ | ವ್ಯಾಸ ಪೂರ್ಣಿಮೆ. |
| 7 | ಭಾನುವಾರ | ತಿರುಚಾನೂರು ಶ್ರೀ ಸುಂದರರಾಜಸ್ವಾಮಿಯವರ ಅವತಾರೋತ್ಸವಾರಂಭ. |
| 9 | ಮಂಗಳವಾರ | ಶ್ರೀ ಸುಂದರಸ್ವಾಮಿ ಅವತಾರೋತ್ಸವ ಸಮಾಪ್ತಿ. |
| 12 | ಶುಕ್ರವಾರ | ಆಂಡಾಳ್ ತಿರುವಾಡಿಪ್ಪೂರಂ ಉತ್ಸವಾರಂಭ. |
| 16 | ಮಂಗಳವಾರ | ಕರ್ಕಾಟಕ ಸಂಕ್ರಮಣ, ಆನಿವರ ಆಸ್ಥಾನ. |
| 21 | ಭಾನುವಾರ | ನಾಗಚತುರ್ಥಿ, ಆಂಡಾಳ್ ತಿರುವಾಡಿಪ್ಪೂರಂ ಉತ್ಸವ ಸಮಾಪ್ತಿ. |
| 22 | ಸೋಮವಾರ | ಗರುಡ ಪಂಚಮಿ. |
| 31 | ಬುಧವಾರ | ಆಳವಂದಾರ್ ವರ್ಷತಿರುನಕ್ಷತ್ರ. |

ದಿಂದ ಕೆರೆಯ ನೀರನು ಕೆರೆಗೆ ಚೆಲ್ಲಿ ವರವಪಡೆದವ ರಂತೆ, ಅವನದ್ದು ಅವನಿಗೇ ಅರ್ಪಿಸುತ್ತಿರುವುದಾಗಿ' ನುಡಿದರು.

## ಮೈಸೂರಿನಲ್ಲಿ ದಾಸಸಾಹಿತ್ಯ ದರ್ಶಿನಿ

ಮೈಸೂರಿನ ಕೃಷ್ಣಮೂರ್ತಿ ಪುರಂನ ಶ್ರೀರಾಘವೇಂದ್ರಸ್ವಾಮಿಗಳ ಕಲ್ಯಾಣ ಮಂಟಪ ದಲ್ಲಿ ದಿನಾಂಕ 26-3-85 ರಿಂದ 2-4-85 ರವರೆಗೆ. ತಿ.ತಿ.ದೇ. ಗಳ ದಾಸಸಾಹಿತ್ಯ ಪ್ರಾಜೆಕ್ಟ್‌ನ ಹರಿದಾಸಸಾಹಿತ್ಯ ಪ್ರದರ್ಶನ ನಡೆಯಿತು.

ಶ್ರೀಮಧ್ವಾಚಾರ್ಯರ ವಿಗ್ರಹ ಪ್ರತಿಷ್ಠಾಪನೋತ್ಸವದ ಅಂಗವಾಗಿ ನಡೆದ ಪ್ರದರ್ಶನವನ್ನು ಡಾ॥ ಪಿ.ಎಸ್. ರಾಮಾನುಜಂ (ಡಿ.ಐ.ಜಿ. ಮೈಸೂರು ದಕ್ಷಿಣ ವಲಯ) ಅವರು ಶ್ರೀ ಶ್ರೀ ವಿದ್ಯಾಮಾನ್ಯ ತೀರ್ಥ ಶ್ರೀಪಾದಂಗಳ ಅಧ್ಯಕ್ಷತೆಯಲ್ಲಿ ಉದ್ಘಾಟಿಸಿದರು.

ತತ್ಸಂಬಂಧದಲ್ಲಿ ಏರ್ಪಡಿಸಲಾಗಿದ್ದ ಉಪನ್ಯಾಸ ಗೋಷ್ಠಿಗಳಲ್ಲಿ ಶ್ರೀ ಬನ್ನಂಜೆ ಗೋವಿಂದಾಚಾರ್ಯ ಹಾಗೂ ಶ್ರೀಪಂಡರೀನಾಥಾಚಾರ್ಯ ಗಲಗಲಿ ಅವರುಗಳು ಹರಿಕಥಾಮೃತ ಸಾರದ ಬಗ್ಗೆ ಉಪನ್ಯಾಸಗಳನ್ನು ನೀಡಿದರು. ಸರ್ವಶ್ರೀ ಸಂಧ್ಯಾವಂದನಂ ಶ್ರೀನಿವಾಸರಾವ್, ಬಳ್ಳಾರಿ ವೆಂಕಟೇಶಾಚಾರ್ಯ, ರುದ್ರಪಟ್ನ ಸೋದರರು, ವಿದುಷಿಯರಾದ ಕೆ. ಜಿ. ಕನಕಲಕ್ಷ್ಮಿ, ಕಮಲ ಹಾಗೂ ರಾಜಲಕ್ಷ್ಮಿ ವೃಂದಗಳವರಿಂದ ಸಂಗೀತ ಸಭೆಗಳು ನಡೆದವು. ಡಾ॥ ಜಿ.ವರದರಾಜಾರಾಯರನ್ನು ಸನ್ಮಾನಿಸಲಾಯಿತು.

ಎಲ್ಲದಿನಗಳು ವಿವಿಧ ಭಜನ ಮಂಡಳಿಗಳಿಂದ ಭಜನ ಗೋಷ್ಠಿಗಳು ನಡೆದವು. ಶ್ರೀ ಕೆ. ಅಪ್ಪಣ್ಣಾಚಾರ್ಯ ಹಾಗೂ ಶ್ರೀ ಎಸ್. ಶ್ರೀನಿವಾಸರಾವ್ ಅವರು ಕಾರ್ಯಕ್ರಮದ ಮೇಲು ವಿಚಾರಣೆ ವಹಿಸಿದ್ದರು.

## ತಿರುಪತಿಯಲ್ಲಿ ಉಪರಾಷ್ಟ್ರಪತಿ

ಭಾರತದ ಉಪರಾಷ್ಟ್ರಪತಿ ಶ್ರೀ ಆರ್. ವೆಂಕಟರಾಮನ್ ಅವರು ತಿರುಮಲೆಗೆ ದಿನಾಂಕ 15-4-85 ರಂದು ಆಗಮಿಸಿ ಶ್ರೀ ವೆಂಕಟೇಶ್ವರ ಸ್ವಾಮಿಯ ಸಂದರ್ಶನ ಮಾಡಿ ಆಶೀರ್ವಾದ ಹೊಂದಿದರು. ಉಪರಾಷ್ಟ್ರಪತಿ ದಂಪತಿಗಳನ್ನು ಆಲಯ ಮರ್ಯಾದೆಗಳೊಂದಿಗೆ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮಿನಾರಾಯಣ ಮತ್ತಿತರರು ಸ್ವಾಗತಿಸಿದರು. (ಅದರ ಸಂಬಂಧದ ಚಿತ್ರಗಳನ್ನು ಒಳರಕ್ಷಾಪತ್ರದಲ್ಲಿ ಕಾಣಬಹುದು)



Edited and Published on behalf of the T. T. Devasthanams by K. Subba Rao, M.A., and Printed at T. T. D. Press by M. Vijayakumar Reddy, Manager, T. T. D. Press, Tirupati – 517501.

